


ಸಂಪುಟ : ೪೬ ಜನವರಿ ೨೦೧೦ ಸಂಚಿಕೆ : ೧

ಸಂಕ್ರಮ ಸಂಚಿಕೆ



ಲಿಂ. ಶ್ರೀ ಆಟವೀ ಸ್ವಾಮಿಗಳು



ಲಿಂ. ಶ್ರೀ ಉದ್ದಾನ ಶಿವಯೋಗಿಗಳು



ಎಳ್ಳು ಬೆಲ್ಲ ತಿಂದು
ಒಳ್ಳೆಯ ಮಾತನಾಡೋಣ

ಸಂಕ್ರಾಂತಿ ಹಬ್ಬದ
ಹಾರ್ದಿಕ ಶುಭಾಶಯಗಳು



ರಾಷ್ಟ್ರಕವಿ ಡಾ. ಜಿ.ಎಸ್. ಶಿವರುದ್ರಪ್ಪ ಅವರಿಗೆ "ನೃಪತುಂಗ ಪ್ರಶಸ್ತಿ"

'ಮನುಷ್ಯ ಹೇಡಿಯಾಗಬಾರದು. ಆತ್ಮವಿಶ್ವಾಸವುಳ್ಳವನಾಗಬೇಕು. ಒಂದಕ್ಕೆ ಹತ್ತು ಮಾಡುತ್ತೇವೆ ಎಂಬ ನಿಷ್ಠೆ ಇರಬೇಕು' ಎನ್ನುತ್ತಿದ್ದರು ನಮ್ಮ ಪೂಜ್ಯ ಗುರುಗಳು. ಗುರುಗಳ ಭೌತಿಕ ಕಾಯ ಇಂದು ನಮ್ಮ ಮುಂದಿಲ್ಲ; ನಿಜ. ಆದರೆ ಅವರ ಜ್ಯೋತಿ ಕಾರ್ಯದ ತೇಜಸ್ಸು ಚಿರಂತನವಾಗಿ ಶ್ರೀಮಠದಲ್ಲಿ ಸುಳಿದಾಡುತ್ತಿದೆ.'

– ಶ್ರೀವಾಣಿ

ಸಂಪಾದಕ :
ಹೆಚ್.ವಿ. ವೀರಭದ್ರಯ್ಯ

ಸಹ ಸಂಪಾದಕ :
ಎಚ್.ಎಸ್. ಸಿದ್ಧಗಂಗಪ್ಪ

ಸಂಚಾಲಕ :
ಎಂ. ರೇಣುಕಾರಾಧ್ಯ

ಪ್ರಕಾಶಕರು:
ಹೆಚ್.ಬಿ. ಗಂಗಾಧರಯ್ಯ
ಹಳೆಯ ವಿದ್ಯಾರ್ಥಿಗಳ ಸಂಘ,
ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ -572 104.

ಮುದ್ರಕರು:
ಶ್ರೀ ಸಿದ್ಧಲಿಂಗೇಶ್ವರಸ್ವಾಮಿ
ಆಫ್‌ಸೆಟ್ ಮುದ್ರಣಾಲಯ,
ಶ್ರೀ ಸಿದ್ಧಗಂಗಾ ಮಠ,
ತುಮಕೂರು -572 104.

ವಿಳಾಸ :
"ಸಂಪಾದಕರು"
'ಸಿದ್ಧಗಂಗಾ' ಮಾಸಪತ್ರಿಕೆ
ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ -೫೭೨ ೧೦೪



॥ ಓಂ ಶ್ರೀ ಗುರುಬಸವಲಿಂಗಾಯ ನಮಃ ॥

ಆವಾವ ಕಾಯಕವ ಮಾಡಿದರು ಬಸವೇಶ
ಆವಗಂ ಶರಣರನು ಸೇವಿಪೆನು ಬಸವೇಶ

# ಸಿದ್ಧಗಂಗಾ

ಸಂಪುಟ : ೪೬ ಜನವರಿ ೨೦೧೦ ಸಂಚಿಕೆ : ೧

## ಒಳಪುಟಗಳಲ್ಲಿ ..................

೨. ಸಂಪಾದಕೀಯ
೩. ಶ್ರೀವಾಣಿ
೪. ಸಿದ್ಧಲಿಂಗೇಶ್ವರ ವಚನ -ಶ್ರೀ ಸಿದ್ಧಗಂಗಾ ಗುರುಕರುಣ ತ್ರಿವಿಧಿ
೫. ಸಂಕ್ರಾಂತಿಯ ಸಂಭ್ರಮ -ಹುಲಿಕಲ್ ನಾಗರಾಜು
೭. ಮಹಾಶಿವಯೋಗಿ ಶ್ರೀ ಅಡವೀಸ್ವಾಮಿಗಳು-ಪಿ.ಎನ್. ಚಂದ್ರಶೇಖರಯ್ಯ
೧೦. ಶಿವಯೋಗಿಯ ಅವತಾರ ಸಾಮಾನ್ಯವೇ ?-ಕೋ.ರಂ. ಬಸವರಾಜು
೧೨. ಬಸವಣ್ಣನವರ ಜೀವನ ದರ್ಶನ -ಆರ್.ಬಿ. ಚಿಲುಮಿ
೧೭. ಗಣರಾಜ್ಯೋತ್ಸವ ರಾಷ್ಟ್ರಪ್ರೇಮದ ಸಂಕೇತವಾಗಲಿ -ಯೋಗೀಶ್ ನಿರ್ವಿಕಲ್ಪ
೧೯. ಜ್ಯೋತಿ ಬೆಳಗಿಸುವುದು -ಎಚ್.ಎಸ್. ಸಿದ್ಧಗಂಗಪ್ಪ
೨೦. ಜಾತ್ರಾ ಪತ್ರಿಕೆ
೨೧. ನೆರೆಪರಿಹಾರ ಒಂದು ಮನವಿ
೨೨. ಶರಣ ಜಯಂತಿ
೨೩. ವಿಶ್ವಸಂಸ್ಕೃತಿಗೆ ವೀರಶೈವಸಂಸ್ಕೃತಿಯ ಕಾಣಿಕೆ -ಪ್ರೊ. ಡಿ.ಜವರೇಗೌಡ
೨೬. ಶಿವಯೋಗಿ ಸಿದ್ಧರಾಮ -ಯು.ಎನ್. ಸಂಗನಾಳಮಠ
೩೦. ಒಕ್ಕಲುತನವೆಂಬ ಜೂಜಾಟ -ಈರಯ್ಯ ಕಿಲ್ಲೇದಾರ
೩೨. ವ್ಯಕ್ತಿ ವಿಶೇಷ -ಹೆಚ್.ಜೆ. ರಾಮಯ್ಯಂಗಾರ್
೩೩. ಅಭಿನಂದನೆ
೩೪. ಶರಣ ಮೇಳ
೩೫. ನೆನಪು
೩೬. ನೂತನ ಯೋಜನೆ
೩೮. ಕ್ಷೇತ್ರವಾರ್ತೆ -ಎಚ್.ಎಸ್. ಸಿದ್ಧಗಂಗಪ್ಪ



ಚಂದಾ ವಿವರ : ವಾರ್ಷಿಕ ಚಂದಾ ರೂ. ೧೨೦/-
ಆಜೀವ ಸದಸ್ಯತ್ವ ರೂ. ೧೦೦೦/- ಬಿಡಿ ಪ್ರತಿ ರೂ. ೧೦.೦೦

## ಆತ್ಮಸಾಕ್ಷಿ

2009 ಸಿಹಿಗಿಂತ ಕಹಿಯನ್ನೇ ಕೊಟ್ಟು ಹೋಯಿತು. ಕಂಡರಿಯದ ಕೇಳರಿಯದ ಪ್ರಕೃತಿ ವಿಕೋಪಕ್ಕೆ ಸಿಕ್ಕಿ ಕರ್ನಾಟಕ ತತ್ತರಿಸಿ ಹೋಯಿತು. ಜನಜೀವನ ನೆಲಕಚ್ಚಿ ಹೋಯಿತು. ಊಹಿಸಲಾಗದ ವಿಪತ್ತು ಬಂದೆರಗಿತು. ಸರ್ಕಾರ, ಜನತೆ ಮಾನವೀಯತೆಯನ್ನು ಮೆರೆಯಿತು. ಆದರೇನು? 'ಮುಂದೇನ ಕೊಟ್ಟಿತು ಮನವೇನು ದಣಿದೀತು ಮುಂಜಾನದಾಗ ಗಿರಿಮಲ್ಲ ಕೊಟ್ಟರೆ ಮನತುಂಬಿ ನಮ್ಮ ಮನೆತುಂಬಿ'- ಎಂಬ ಜನಪದದ ಅನುಭವದ ಮಾತು ಸುಳ್ಳಾಗಲಿಲ್ಲ. ರಾಜ್ಯದ ಉತ್ತರ ಭಾಗದ ಬಹುತೇಕ ಜಿಲ್ಲೆಗಳಿಂದು ಬಣಗುಡುತ್ತಿವೆ. ಮನೆ, ಮಠ, ದನ, ಕರು, ಮಕ್ಕಳನ್ನು ಕಳೆದುಕೊಂಡ ದುರ್ದೈವಿಗಳು ಜೀವಚ್ಛವಗಾಗಿ ಉಸಿರಾಡುತ್ತಿದ್ದಾರೆ. 'ನುಡಿವೆಣ, ನಡೆವೆಣ' ವಾಗಿದ್ದಾರೆ. ನಮ್ಮ ಬಾಳು ಅರಳೀತೇ? ಮತ್ತೆ ಎದ್ದು ನಿಂತೇವೇ? ಎಂದು ತಲೆ ಮೇಲೆ ಕೈಹೊತ್ತು ಕುಳಿತುಕೊಳ್ಳುವಂತಾಗಿದೆ.

ಹೀಗಿರುವಾಗ ನಮ್ಮನ್ನಾಳುವ ನಾಯಕರು ಮಾಡುತ್ತಿರುವುದಾದರೂ ಏನು ? ಆತ್ಮಸಾಕ್ಷಿಯೆಂಬುದಿದೆಯೇ ಇವರುಗಳಿಗೆ? ಯಾರಿಂದ ಮತ ಪಡೆದು ಬಂದರೋ ಅವರ ಬಗ್ಗೆ ಇವರು ತಾಳಿರುವ ನಿಲುವಾದರೂ ಏನು ? ತಮ್ಮೆಲ್ಲ ಮೋಜು ಮೇಜುವಾನಿಗಳನ್ನು ಬಿಟ್ಟು ಸಂತ್ರಸ್ತ ಜನತೆಯತ್ತ ದೌಡಾಯಿಸಬೇಕಲ್ಲವೆ? ಸಂಘ ಸಂಸ್ಥೆಗಳು, ಮಠ ಮಾನ್ಯಗಳು, ಉದಾರ ಮನೋಭಾವದ ಪುಣ್ಯಾತ್ಮರು ಮುಕ್ತಹಸ್ತದಿಂದ ಕೊಡಲು ಬಂದ ನೆರವನ್ನು ದುಃಖಿಗಳಿಗೆ ತಲುಪಿಸುವ ಕರ್ತವ್ಯವನ್ನಾದರೂ ಮಾಡಬೇಕಿತ್ತಲ್ಲವೆ ? ಕೇವಲ ಮಾಧ್ಯಮಗಳ ಮೂಲಕ ಹೇಳಿಕೆಗಳನ್ನು ಕೊಟ್ಟರಾಯಿತೆ? ಮಾತು ಮಾರುದ್ದ ಕೆಲಸ ಚೋಟುದ್ದ ಎಂಬಂತಾಗಿಲ್ಲದೆ. ಸಂತ್ರಸ್ತರು ವಿಧಾನಸೌಧದ ಮೆಟ್ಟಿಲವರೆಗೂ ಬರಬೇಕಾಯಿತೆ? ಇನ್ನಾದರೂ ತಮ್ಮ ಲಾಲಸೆಗಳನ್ನು ದೂರಸರಿಸಿ ನೋವುಣ್ಣುತ್ತಿರುವವರ ನೆರವಿಗೆ ನಡೆಯುವರೆ ?

ಪರಮಪೂಜ್ಯ ಸಿದ್ಧಗಂಗಾ ಶ್ರೀ ಶ್ರೀಗಳವರು ಇದೀಗ ಹಳ್ಳಿಹಳ್ಳಿಗಳಿಗೆ ಜೋಳಿಗೆ ಹಿಡಿದು ನಡೆದಿದ್ದಾರೆ. ಸಂತ್ರಸ್ತರಿಗಾಗಿ ಬೇಡುತ್ತಿದ್ದಾರೆ. ಹೃದಯವಂತರು ನೀಡಲು ಮುಂದೆ ಬರುತ್ತಿದ್ದಾರೆ. ಈ ಸಂದರ್ಭದಲ್ಲಿ 'ಸಿದ್ಧಗಂಗಾ' ನಿಮ್ಮನ್ನು ಕೈಮುಗಿದು ಕೇಳುತ್ತಿದೆ. ನೊಂದವರ ಬೆಂದ ಬದುಕಿಗಾಗಿ ಮುಂದೆ ಬನ್ನಿ. ಕೈನೀಡಿ ಕೊಡಿ. ಗುರು ಮುಟ್ಟಿದ್ದು ಗುಡ್ಡವಾಗಲಿ. ಆದಷ್ಟು ಕೊಡಿ. ಕೊಡದೆ ಇರಬೇಡಿ. ಈಗ ಗುಡಿಗಳನ್ನು ಕಟ್ಟಿಸುವುದಕ್ಕಿಂತ, ಲಕ್ಷ ದೀಪೋತ್ಸವಗಳಿಗಿಂತ, ಕಣ್ಣೀರಲ್ಲಿ ಕೈ ತೊಳೆಯುತ್ತಿರುವ ಬಂಧುಗಳಿಗೆ 'ಆಸರೆ'ಯಾಗೋಣ.

ಇನ್ನು-

ನಮ್ಮನ್ನು ಅಗಲಿದ ಎರಡು ಮಹಾಚೇತನಗಳಿಗೆ 'ಕನ್ನಡವೇ ಸತ್ಯ'ವೆಂದು ಹಾಡಿದ ಅಪೂರ್ವ ಪ್ರತಿಭೆಯ ಸನ್ಮಾನ್ಯ ಶ್ರೀ ಸಿ. ಅಶ್ವತ್‌ರವರಿಗೆ, ಅಪ್ರತಿಮ ಕಲಾವಿದ ಆಧ್ಯಾತ್ಮಮುಖಿಯಾಗಿ ಮುನ್ನಡೆಯುತ್ತಿದ್ದ ಚಲನಚಿತ್ರದ ದಿಗ್ಗಜರಾದ ಸನ್ಮಾನ್ಯ ಶ್ರೀ ವಿಷ್ಣುವರ್ಧನ್ ಅವರಿಗೆ 'ಸಿದ್ಧಗಂಗಾ' ಶ್ರದ್ಧಾಂಜಲಿಯನ್ನರ್ಪಿಸುತ್ತದೆ.

-ಸಂಪಾದಕ.







## ಚಾರಿತ್ರ್ಯ ಶುದ್ಧಿ

ನೈತಿಕತೆಯ ಅವಸರ್ಪಿಣಿಯ ಕಾಲ. ಯಾವೊಂದು ಕ್ಷೇತ್ರವೂ ಚಾರಿತ್ರ್ಯ ಶುದ್ಧಿಯನ್ನು ಉಳಿಸಿಕೊಂಡಿಲ್ಲ. ಅರ್ಥಶೌಚವಂತೂ ಹೇಳಹೆಸರಿಲ್ಲದಂತಾಗಿದೆ. ಸ್ಥಾನಮಾನದ ಅರಿವೇ ಇಲ್ಲದ ವಿದ್ಯಮಾನಗಳು ಎಗ್ಗುಸಿಗ್ಗಿಲ್ಲದೆ ವಿಜೃಂಭಿಸುತ್ತಿದೆ. ಆತ್ಮಶೂನ್ಯ ಜೀವನವೇ ಆದರ್ಶವೆಂಬಂತಾಗಿವೆ. ದೊಡ್ಡವರು ದಾರಿತಪ್ಪಿ ನಡೆಯುತ್ತಿದ್ದಾರೆ. ಯುವಜನತೆಗೆ ಮಾರ್ಗದರ್ಶನದ ಅಭಾವ ಸೃಷ್ಟಿಯಾಗಿದೆ. ಪ್ರಲೋಭನೆಯ ಬೆನ್ನು ಹತ್ತಿದ್ದಾರೆ. ಸಾಮಾನ್ಯ ಜನರೂ ಸಹ. ಆಡಂಬರ, ಡಂಬುಡಳಹು ಪ್ರಿಯವಾಗುತ್ತಿವೆ. ಧರ್ಮ, ದೇಶ, ಜ್ಞಾನ, ಸಂಸ್ಕೃತಿಗಳೆಂಬುವು ತೆರೆಮರೆಗೆ ಸರಿಯುತ್ತಿವೆ. ಚಾರಿತ್ರಿಕ ಪ್ರಜ್ಞೆ ಇಲ್ಲವೇ ಇಲ್ಲ. ದುಡಿದು ತಿನ್ನುವ ಜೀವನ ಶೈಲಿಯಿಂದ ದೂರ ಸರಿಯಲಾಗಿದೆ. ಸಂಗ್ರಹ ಬುದ್ಧಿ ರಾಕ್ಷಸಾಕಾರದಲ್ಲಿ ಬೆಳೆದು ಬಿಟ್ಟಿದೆ. ಕೋಟಿ ಕೋಟಿಗಟ್ಟಲೆ ಕೂಡಿ ಹಾಕಿದರೂ ದಾಹ ತೀರದಾಗಿದೆ. ನಾಯಕತ್ವದ ದೌರ್ಬಲ್ಯದಿಂದಾಗಿ ರಾಷ್ಟ್ರಜೀವನ ತತ್ತರಿಸುತ್ತಿದೆ. ಬೆಲೆಯೇರಿಕೆಗೆ ಕಡಿವಾಣ ಹಾಕುವವರಿಲ್ಲವಾಗಿದೆ. ಪ್ರಕೃತಿಯೂ ಮುನಿದು ನಿಂತಾಗಿದೆ. ಜನ ಜೀವನ ತಲ್ಲಣಿಸುತ್ತಿದೆ. ಧರೆಯೇ ಹೊತ್ತು ಉರಿಯುವಂತಾಗಿದೆ. ಕಾಡಿಲ್ಲದೆ ನಾಡು ಬಣಬಣಗುಟ್ಟುತ್ತಿದೆ. ನದಿಗಳೆಲ್ಲ ಬತ್ತಿ ಹೋಗಿವೆ; ಹೋಗುತ್ತಿವೆ. ಕೃಷಿ, ವ್ಯಾಪಾರ, ಕುಲಕಸುಬುಗಳಿಂದ ಜೀವನ ನಿರ್ವಹಣೆ ದುರ್ಲಭವಾಗುತ್ತಿದೆ. ವಿಜ್ಞಾನದ ಆವಿಷ್ಕಾರಗಳು ಆಗುತ್ತಲೇ ಇವೆ. ಆದರೆ ಅವು ಯುದ್ಧೋನ್ಮುಖವಾಗಿವೆ. ಅಲ್ಪಶ್ರಮ ಅಧಿಕ ಲಾಭ ಬದುಕಿನ ಸೂತ್ರವಾಗಿದೆ. ಶ್ರಮ ಸಂಸ್ಕೃತಿಯ ಆರಾಧನೆ, ಪರಿಪಾಲನೆ ಕಾಣದಾಗಿದೆ. ಗ್ರಾಮ ಜೀವನ ಮಂಗಳಕರವಾಗಿಲ್ಲ. ಪ್ರತಿಗ್ರಾಮವೂ ದ್ವೇಷಾಸೂಯೆಗಳ, ಕ್ಷುಲ್ಲಕ ಜಾತಿ ಜಗಳಗಳ, ಅಗ್ನಿಕುಂಡಗಳಾಗುತ್ತಿವೆ. ಇವುಗಳೆಲ್ಲ ಸರಿಪಡಿಸುವ ಪುಣ್ಯಪುರುಷನ ಆಗಮನವನ್ನು ಕಾಲ ಎದುರು ನೋಡುತ್ತಿದೆ. ಆ ಕಾಲ ಆದಷ್ಟು ಬೇಗ ಬರುವಂತಾಗಲಿ ಎಂದು ಹಾರೈಸುತ್ತೇವೆ.

*



## ಶ್ರೀ ಸಿದ್ಧಲಿಂಗೇಶ್ವರ ವಚನ

*ಕತ್ತಲೆಯ ಮನೆಯಲ್ಲಿ ಕಾಮಿನಿ ಮುತ್ತ ಸರಗೈವುದ*
*ಕಂಡೆನಯ್ಯಾ*
*ಕತ್ತಲೆ ಹರಿದು ಮನ ಬತ್ತಲೆಯಾಗಿ*
*ತತ್ವಮಸಿವಾಕ್ಯದಿಂದತ್ತತ್ತ ತಾನಾಗಿ*
*ಸತ್ತ ಬಳಿಕ ಇನ್ನೆತ್ತಳ ಯೋಗ ಹೇಳು*
*ಮಹಾಲಿಂಗಗುರು ಶಿವಸಿದ್ಧೇಶ್ವರ ಪ್ರಭುವೇ.*

ಪರಿಪೂರ್ಣಜ್ಞಾನ ಸ್ವರೂಪವಾದ ಚಿದಂಗವೆಂಬ ಮಂದಿರದಲ್ಲಿ ಸುಜ್ಞಾನ ಸ್ವರೂಪಾದ ಶರಣನು, ಮುಕ್ತಿ ಸ್ವರೂಪಾದ ಪರಬ್ರಹ್ಮದ ಸರ್ವಾಚಾರ ಸಂಪತ್ತಿನಾಚರಣೆಯನು, ಅಷ್ಟವಿಧ ಸಂಬಂಧವಿಡಿದಾಚರಿಸುವುದನು ಜ್ಞಾನದೃಕ್ಕಿನಿಂದೆ ನಿದರ್ಶನವಾದನು. ಅಂಗಲಿಂಗವೆಂಬ ಖಂಡಿತಜ್ಞಾನದಾವರಣವು ಪೂರ್ಣ ಜ್ಞಾನದಿಂದೆ ನಿವೃತ್ತಿಯಾಗಿ, ಶರಣನ ಮನೋಮುಖದಲ್ಲಿ ತೋರುವ ತೋರಿಕೆ ಎಲ್ಲವು ಲಿಂಗಧ್ಯಾನದಿಂದೆ ನಿಷ್ಪತ್ತಿಯಾಯಿತ್ತು. ಅಂತಪ್ಪ ಮನೋವ್ಯಾಪಾರವು ಲಿಂಗದಲ್ಲೇಕತ್ವವನೆಯ್ದಿದ ಶರಣನು, ತತ್‌ತ್ವಂಅಸಿಯೆಂಬ ಮಹಾವಾಕ್ಯವನು ತನ್ನೊಳಗೆ ಗರ್ಭೀಕರಿಸಿಕೊಂಡೊಪ್ಪಲ್ಪಟ್ಟ ಸದ್ರೂಪಬ್ರಹ್ಮವೆ ತಾನಾಗಿ, ತಾನೆಂಬ ಭಾವದ ನಿಷ್ಪತ್ತಿಯಾದ ಮೇಲೆ ಆ ಪರಬ್ರಹ್ಮದಲ್ಲಿ ಇದಿರಿಟ್ಟು ಕೂಡಿಹೆನಗಲೆನೆಂಬ ದ್ವೈತಾದ್ವೈತವೇನೂ ತೋರಲಿಲ್ಲ.

(ಕೃಪೆ : ಷಟ್‌ಸ್ಥಲಜ್ಞಾನಿ ಸೋಮಶೇಖರಶಿವಯೋಗಿಕೃತ – ತೋಂಟದ ಸಿದ್ಧಲಿಂಗೇಶ್ವರನ ಷಟ್‌ಸ್ಥಲ ಜ್ಞಾನಸಾರಾಮೃತದ ಬೆಡಗಿನ ವಚನದ ಟೀಕೆ – ವೀರಶೈವ ಅಧ್ಯಯನ ಸಂಸ್ಥೆ- ಶ್ರೀ ಜಗದ್ಗುರು ತೋಂಟದಾರ್ಯ ಸಂಸ್ಥಾನ ಮಠ – ಡಂಬಳ- ಗದಗ)

## ಶ್ರೀ ಸಿದ್ಧಗಂಗಾ ಗುರುಕರುಣ ತ್ರಿವಿಧಿ

ಕಾಯವಳಿಯುವ ಮುನ್ನ ಕಾಣೆಂದೆ ಕೈಲಾಸ
'ಕಾಯಕವೆ ಕೈಲಾಸ' ಎಂದೆನುತ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಹೂಮುಡಿಸಿ ಪೂಜಿಸಿದೆ ಕರತಲದ ಜ್ಯೋತಿಗೆ
'ಹೂವಿಲ್ಲದ ಪರಿಮಳದ' ಪೂಜೆಯೊಳು । ನನ್ನತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

'ನಡೆದಾಡೋ ದೇವರಾಗಿ ಜನಮನದಿ ನೆಲಸಿದೆ
ನಡೆನುಡಿಯ ಮಡಿಮಾಡಿ ಬೆಳಗಿದೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಕಾಯಪೀಠವ ಮಾಡಿ ಮನವ ಲಿಂಗವ ಮಾಡಿ
ಜಗವ ಸಲಹುವ ಶಿವಯೋಗಿ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಸುಜ್ಞಾನಭರಿತನೆ ಅನುಪಮಶಿವಸುಖಿಯೆ
ವಿಶ್ವ ಸಂಸಾರಿಯೆ ಗುರುವಿಭುವೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

'ಅಶನವ ತೊರೆದಾತ ವ್ಯಸನವ ಮರೆದಾತ'
ಯಶಜಸವ ಕಾಮಿಸದ ಶಿವತಾತ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಹಿರಿದು ಕಿರಿದೆಂಬುದನು ಅರಿದು ಹಿಂದಿರಿಸಿದ
ಶರಣ ಸಿರಿಬಾನಿನ ಸಿರಿಸೂರ್ಯ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

'ಸುಳಿದು ಜಂಗಮವಾಗಿನಿಂದು ಭಕ್ತನಾಗಿ'
ಪರಿಮಳದತಂಗಾಳಿ ಸೂಸಿರುವ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

'ಬಾರದ ಭವದಲ್ಲಿ' ಬಂದಿರುವ ಭಾಗ್ಯವೆ
ಭಾವಲೋಕದ ಸಿರಿಬಂಧು । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

'ಕನ್ನಡಿಯುಂಡಿರುವ ಬಿಂಬದಂತಿರುವ
ಕಬ್ಬುನವುಂಡ ನೀರಾದ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

– ಹೆಚ್.ವಿ. ವೀರಭದ್ರಯ್ಯ







## ಸಂಕ್ರಾಂತಿ ಸಂಭ್ರಮ

-ಹುಲಿಕಲ್ ನಾಗರಾಜ*



ಹಬ್ಬ ಹರಿದಿನಗಳು ನಮ್ಮ ಸನಾತನ ಸಂಸ್ಕೃತಿಯ ಒಂದು ಅಂಗವೇ ಆಗಿದೆ. ಹಬ್ಬಗಳನ್ನು ಆಚರಿಸುವಾಗ ಅವಕ್ಕೆ ಒಂದು ನಿಯಮವೇ ಇದೆ. ಪ್ರಾಂತ್ಯದಿಂದ ಪ್ರಾಂತ್ಯಕ್ಕೆ ಹಬ್ಬಗಳ ಆಚರಣೆಯಲ್ಲಿ ವಿಭಿನ್ನತೆ ಇದ್ದರೂ ಮೂಲ ಉದ್ದೇಶ ಮಾತ್ರ ಒಂದೇ ಆಗಿರುತ್ತದೆ.

ಹಿಂದೂ ಸಂಪ್ರದಾಯದಲ್ಲಿ ಶ್ರಾವಣಮಾಸ ಆರಂಭವಾಗುತ್ತಿದ್ದಂತೆಯೇ ಹಬ್ಬಗಳ ಯಾದಿ ಕಾಲಿರಿಸುತ್ತದೆ. ಅವುಗಳಲ್ಲಿ ಪ್ರಮುಖವಾಗಿ ಮಾಸಕ್ಕೊಂದು ಹಬ್ಬ ಇದ್ದೇ ಇರುತ್ತದೆ. ಮುಖ್ಯವಾಗಿ ಸಂಕ್ರಾಂತಿ, ಶಿವರಾತ್ರಿ, ಯುಗಾದಿ, ಬಸವ ಜಯಂತಿ, ಗೌರಿಗಣೇಶ, ನವರಾತ್ರಿ, ದೀಪಾವಳಿ, ಇತ್ಯಾದಿ ಹಬ್ಬಗಳು. ಆಚರಣೆ ಮತ್ತು ಸಂಪ್ರದಾಯದ ದೃಷ್ಟಿಯಿಂದ ಹಿಂದೂಗಳಲ್ಲಿ ಭಾವೈಕ್ಯತೆಯನ್ನು ಮೂಡಿಸುವ ಹಬ್ಬಗಳೇ ಆಗಿವೆ. ಕರ್ನಾಟಕ, ಆಂಧ್ರ, ತಮಿಳುನಾಡುಗಳಲ್ಲಿ ಎಲ್ಲಾ ಹಬ್ಬಗಳ ಆಚರಣೆಯ ವೈಶಿಷ್ಟ್ಯ ಒಂದೇ ಆಗಿದ್ದರೂ ತಮಿಳುನಾಡಿನಲ್ಲಿ ಸಂಕ್ರಾಂತಿ ಹಬ್ಬದ ಮಹತ್ವ ಅತಿ ಹೆಚ್ಚು. ಸಂಕ್ರಾಂತಿಯನ್ನು ಪೊಂಗಲ್ ಎಂಬ ಹೆಸರಿನಿಂದಲೂ ಅಲ್ಲಿನ ಭಾಷಿಕರು ಕರೆಯುತ್ತಾರೆ. ಪೊಂಗಲ್ ಎಂದರೆ ಅಕ್ಕಿ, ಬೆಲ್ಲ, ಹೆಸರುಬೇಳೆ ಮೂರನ್ನು ಬೇಯಿಸಿದ ಖಾದ್ಯ ಎಂಬ ಅರ್ಥವೂ ಉಂಟು. ಕರ್ನಾಟಕದ ಜನಪದ ಸಂಸ್ಕೃತಿಯ ಪ್ರಕಾರ ನಂದೀಶ್ವರ ಹುಟ್ಟಿದ ದಿನವೇ ಸಂಕ್ರಾಂತಿ ದಿನ ಎಂಬುದು ಪ್ರಾಜ್ಞರ ಅಭಿಮತವಾದ್ದರಿಂದ

*ಶಿವನ ಹೊತ್ತ ಶಿವಭಕ್ತನಂದೀಶ*
*ಶರಣು ಶರಣು ನೀ ನೀಡು ಸಂತೋಷ*
*ಜಗದ ಜನರ ಮನಕೆ ಕೊಡಲು ಸುಖಶಾಂತಿ*
*ಜಗಕೆ ನೀನು ಬಂದ ದಿನವೆ ಸಂಕ್ರಾಂತಿ.......*
ಎಂದು ಹೇಳಿರಬಹುದು.

ಪುರಾಣದ ಪ್ರಕಾರ ಕುರುಪಿತಾಮಹ ಭೀಷ್ಮಾಚಾರ್ಯರು ಪ್ರಾಣ ತ್ಯಾಗ ಮಾಡಿದ್ದು ಮಕರ ಸಂಕ್ರಾಂತಿಯಂದು ಎಂಬುದು ಮಹಾಭಾರತದಲ್ಲಿ ಉಲ್ಲೇಖವಾಗಿದೆ. ಪುರಾಣ ಮತ್ತು ಧಾರ್ಮಿಕ ಕತೆಯ ಪ್ರತೀಕವಾದ ಸಂಕ್ರಾಂತಿ ಸಂಕ್ರಮಣದ ಪರ್ವಕಾಲ. ಸೂರ್ಯನು ಮಕರರಾಶಿಯನ್ನು ಪ್ರವೇಶಿಸಿ ಉತ್ತರಾಭಿಮುಖವಾಗಿ ಚಲಿಸುವುದರಿಂದ ಉತ್ತರಾಯಣ ಪುಣ್ಯಕಾಲ, ಮಕರಸಂಕ್ರಾಂತಿ ಎಂದೂ ಕರೆಯುತ್ತಾರೆ. ಈ ಪರ್ವಕಾಲದಲ್ಲಿ ಗಂಗಾ, ಕಾವೇರಿ ನದಿಗಳಲ್ಲಿ ಭಕ್ತರು ಮೈಗೆ ತಿಲಚೂರ್ಣ ಲೇಪಿಸಿಕೊಂಡು ಸ್ನಾನಮಾಡಿ ಜಪ, ತಪ, ಯಾಗ ಹೋಮಾದಿಗಳನ್ನು ಮಾಡಿ ಪುನೀತರಾಗುತ್ತಾರೆ.

ಕೊರೆವ ಚಳಿಯ ಈ ಮಾಸದಲ್ಲಿ ದೇವಾಲಯಗಳಲ್ಲಿ ಪ್ರಾತಃಕಾಲದ ಪೂಜೆಗಳು ಬ್ರಾಹ್ಮೀ ಮುಹೂರ್ತ ಮತ್ತು ಸೂರ್ಯೋದಯದ ಸಂಧಿಕಾಲದಲ್ಲಿ ನಡೆಯುವುದರಿಂದ ಶ್ರದ್ಧಾಭಕ್ತಿಯಿಂದ ಪೂಜೆ ಸಲ್ಲಿಸಿದರೆ ಇಷ್ಟಾರ್ಥ ಸಿದ್ಧಿಸುವುದೆಂಬುದು ಆಸ್ತಿಕರ ನಂಬಿಕೆ. ಧನುರ್ಮಾಸದ ಕೊನೆಯ ದಿನವೇ ಪವಿತ್ರ ಸಂಕ್ರಾಂತಿ. ಈ ಹಬ್ಬದ ಪ್ರಧಾನ ದೇವನಾದ ಸೂರ್ಯದೇವನನ್ನು ಪ್ರಾರ್ಥಿಸಿ ಪೂಜೆ ಸಲ್ಲಿಸುವುದರಿಂದ ಇಷ್ಟಾರ್ಥ ಸಿದ್ಧಿಸುವುದೆಂಬ ನಂಬಿಕೆ ಆಸ್ತಿಕರದು. ಅಂತಹ

* ನಂ.೧೯೫, ಹಳೇತಿಪ್ಪಸಂದ್ರ, ಎಚ್.ಎ.ಎಲ್. ೨ನೇಹಂತ, ಬೆಂಗಳೂರು-೫೬೦ ೦೦೮.

ಸೂರ್ಯ ಪ್ರಾರ್ಥನೆಯ ಒಂದೆರಡು ಶ್ಲೋಕಗಳನ್ನು ಸಾಂದರ್ಭಿಕವಾಗಿ ಇಲ್ಲಿ ಉದಾಹರಿಸಬಹುದು.

**ಜಪಾ ಕುಸುಮ ಸಂಕಾಶಂ**
**ಕಾಶ್ಯಪೇಯಂ ಮಹಾದ್ಯುತಿಂ**
**ತಮ್ಮೋರಿಂ ಸರ್ವಪಾಪಘ್ನಂ**
**ಪ್ರಣತೋಸ್ಮಿ ದಿವಾಕರಃ**

ಮತ್ತೊಂದು

**ಓಂ ಭಾಸ್ಕರಾಯ ವಿದ್ಮಹೇ**
**ಮಹಾದ್ಯುತಿಕರಾಯಧೀಮಹಿ ತನ್ನೋ**
**ಆದಿತ್ಯಃ ಪ್ರಚೋದಯಾತ್**

**ಗ್ರಾಮೀಣರ ಸಂಕ್ರಾಂತಿ :**

ರೈತರು ಧಾನ್ಯಲಕ್ಷ್ಮಿಯನ್ನು ಮನೆತುಂಬಿಸಿಕೊಳ್ಳುವುದು ಸಂಕ್ರಾಂತಿಯ ಸಮಯದಲ್ಲಿಯೇ. ಈ ದಿನ ಗೋಪೂಜೆಯನ್ನು ನಡೆಸುವ ವಾಡಿಕೆಯಿದೆ. ಗೋವುಗಳ ಮೈ ತೊಳೆದು, ಕೊಂಬುಗಳಿಗೆ ಬಣ್ಣ ಬಳಿದು ಗಗ್ಗರ, ಗೌಸು ತೊಡಿಸಿ ಮೆರವಣಿಗೆಯಲ್ಲಿ ಕರೆತಂದು, ಗ್ರಾಮದ ಆಯಕಟ್ಟಿನ ಪ್ರದೇಶದಲ್ಲಿ ಬೆಂಕಿಯ ದಗದಗನೆ ಉರಿಯುವ ಕಿಚ್ಚು ಎಬ್ಬಿಸಿ ಆ ಜ್ವಾಲೆಯ ಮಧ್ಯೆ ಅಲಂಕರಿಸಿದ ದನಕರುಗಳನ್ನು ಓಡಿಸುತ್ತಾರೆ. ಈ ಕ್ರಿಯೆಗೆ ಕಿಚ್ಚು ಹಾಯಿಸುವುದು ಎನ್ನುತ್ತಾರೆ. ಬೇಯಿಸಿದ ಕಡಲೆಕಾಯಿ, ಗೆಣಸು, ಅವರೆಕಾಯಿ ಇವುಗಳನ್ನು ಒಕ್ಕಣೆಗಾಗಿ ನಿಂತಿರುವ ಬಣವೆ (ಮೆದೆ)ಗಳಿಗೆ ಎಡೆಯಾಗಿ ಸಮರ್ಪಿಸುವುದು ರೈತ ಸಮುದಾಯದ ಆಚರಣೆಯಲ್ಲುಂಟು.



ಸಂಕ್ರಾಂತಿ ಹಬ್ಬದಲ್ಲಿ ಪ್ರಮುಖವಾಗಿ ಎಳ್ಳು ಬೆಲ್ಲ ವಿನಿಮಯ ಮಾಡಿಕೊಳ್ಳುವ ಪದ್ಧತಿಯುಂಟು. **ಎಳ್ಳು ಬೆಲ್ಲ ತಿಂದು ಒಳ್ಳೆ ಮಾತನಾಡುವ** ಎಂದು ಗ್ರಾಮೀಣರ ಗಾದೆಯಂತೆ ಸ್ನೇಹ ಭ್ರಾತೃತ್ವ ಮತ್ತು ಬಾಂಧವ್ಯವನ್ನು ವೃದ್ಧಿ ಮಾಡಿಕೊಳ್ಳುವುದೇ ಎಳ್ಳು ಬೀರುವ ಸಂಕೇತವಿರಬಹುದು. ಚಿಕ್ಕ ಚಿಕ್ಕ ಮಕ್ಕಳಿಗೆ ಅಭ್ಯಂಜನ ಸ್ನಾನ ಮಾಡಿಸಿ ಬೋರೆ ಹಣ್ಣು ಮತ್ತು ನಾಣ್ಯಗಳನ್ನು ಒಂದು ಚೊಂಬಿಗೆ ತುಂಬಿ ಮಕ್ಕಳನ್ನು ಹೊಸ್ತಿಲ ಮೇಲೆ ಕೂರಿಸಿ ಅವರ ತಲೆಯ ಮೇಲೆ ಬೋರೆಹಣ್ಣು ಮತ್ತು ನಾಣ್ಯಗಳನ್ನು ಸುರಿದು, ನಿವಾಳಿಸಿ ದೃಷ್ಟಿ ತೆಗೆಯುತ್ತಾರೆ. ಈ ಆಚರಣೆಗೆ ಹೊನ್ನು ಸುರಿಯುವ ಶಾಸ್ತ್ರ ಎಂದೂ ಕರೆಯುತ್ತಾರೆ. ಇದು ಕೆಲವು ಪ್ರಾಂತ್ಯಗಳಲ್ಲಿ ಮಾತ್ರ ಆಚರಣೆಯಲ್ಲಿದೆ.

**ಪವಿತ್ರ ಸಂಕ್ರಾಂತಿ :**

ಪರ್ವಕಾಲದಲ್ಲಿ ಸಂಕ್ರಾಂತಿಯಂದು ಪವಿತ್ರ ನದಿ, ತಟಾಕಗಳಲ್ಲಿ ಸ್ನಾನಮಾಡಿದರೆ ಸಮಸ್ತ ಪಾಪವೂ ಕ್ಷಯಿಸುವುದೆಂದು ಹೇಳುವ ಹಿನ್ನಲೆಯಲ್ಲಿ ಅಲಹಾಬಾದಿನಲ್ಲಿ ಈ ದಿನದಂದು ಪವಿತ್ರ ಕುಂಭಮೇಳ ನಡೆದು ಅಸಂಖ್ಯಾತ ಭಕ್ತರು ಪವಿತ್ರ ನದಿಯಲ್ಲಿ ಮಿಂದು ಶ್ರದ್ಧಾ ಭಕ್ತಿಯಿಂದ ತ್ರಿವೇಣಿ ಸಂಗಮ ಸ್ವರೂಪವಾದ ಗಂಗಾ, ಯಮುನಾ, ಸರಸ್ವತಿ ನದಿಯನ್ನು ಮನಸಾ ಸ್ಮರಿಸುತ್ತಾರೆ.

ತ್ರಿವೇಣಿ ಸಂಗಮವು ದೇವ ದಾನವರ ಯುದ್ಧಸಮಯದಲ್ಲಿ ಅಮೃತ ಸಿಂಚನವಾದ ಸ್ಥಳವೆಂದು, ಈ ಸ್ಥಳದಲ್ಲಿ ಸಂಕ್ರಾಂತಿ ಹಬ್ಬದಂದು ಮಿಂದರೆ ಸುಕ್ಷೇಮವಾಗುವುದೆಂದೂ ಅಸಂಖ್ಯಭಕ್ತರು ಇಲ್ಲಿ ನೆರೆಯುವುದುಂಟು. ಗಂಗಾ, ಯಮುನಾ, ಸರಸ್ವತಿಯವರ ಈ ಸಂಗಮಕ್ಷೇತ್ರದಲ್ಲಿ

**ಗಂಗೇಚ ಯಮುನೇಚೈವ**
**ಗೋದಾವರೀಸರಸ್ವತಿ ನರ್ಮದೇ ಸಿಂಧು**
**ಕಾವೇರಿ ಜಲೇಸ್ಮಿನ್ ಸನ್ನಿಧಿಂ ಕುರು**

ಎಂದು ಭಕ್ತ ಸಮುದಾಯವು ಸಪ್ತನದಿಗಳನ್ನು ಸ್ಮರಿಸಿ ತ್ರಿವೇಣಿಸಂಗಮದಲ್ಲಿ ಮೀಯುವುದು ಇಲ್ಲಿನ ವಾಡಿಕೆ.

ಈ ಹಬ್ಬದ ಆಚರಣೆಯಲ್ಲಿ ಪ್ರಾಂತ್ಯದಿಂದ ಪ್ರಾಂತ್ಯಕ್ಕೆ ಅಲ್ಪ ಸ್ವಲ್ಪ ಬದಲಾವಣೆ ಕಂಡು ಬಂದರೂ ಒಟ್ಟಾರೆ ಹಬ್ಬದ ಅರ್ಥ ಒಂದೇ ಆಗಿರುತ್ತದೆ. ಸಂಕ್ರಾಂತಿಯ ನಾಡಿನ ಸರ್ವತೋಮುಖ ಅಭಿವೃದ್ಧಿಗೆ ತಾರಕವಾಗಲಿ.







# ಮಹಾಶಿವಯೋಗಿ ಶ್ರೀ ಅಡವೀಸ್ವಾಮಿಗಳು

-ಪಿ.ಎನ್. ಚಂದ್ರಶೇಖರಯ್ಯ *



ಶ್ರೀ ಸಿದ್ಧಗಂಗಾ ಮಠದ ಗುರುಪರಂಪರೆಯಲ್ಲಿ ಶ್ರೀ ಸಿದ್ಧಲಿಂಗಸ್ವಾಮಿಗಳವರು ಪೀಠಾಧ್ಯಕ್ಷರಾಗಿದ್ದ ಸಂದರ್ಭದಲ್ಲಿ ಶ್ರೀ ಅಡವೀಸ್ವಾಮಿಗಳವರು ಶ್ರೀ ಸಿದ್ಧಗಂಗಾ ಮಠಕ್ಕೆ ಬಂದರು. ಶ್ರೀ ಸಿದ್ಧಗಂಗಾಮಠದ ಪ್ರಾಕೃತಿಕ ಸೌಂದರ್ಯ, ಧಾರ್ಮಿಕ ಪರಿಸರ, ನೆಲಜನದ ಪಾವಿತ್ರ್ಯತೆ ಅಲ್ಲಿಯೇ ನೆಲೆ ನಿಲ್ಲುವಂತೆ ಪ್ರೇರೇಪಿಸಿತು. ಈ ಪುಣ್ಯ ಪರಿಸರ ಅನೇಕ ಭಕ್ತಾಧಿಗಳನ್ನು ಆಕರ್ಷಿಸಿತ್ತು. ಹರದನ ಹಳ್ಳಿಯ ಶೂನ್ಯ ಪೀಠಪರಂಪರೆಯ ಅನೇಕ ಸಿದ್ಧಪುರುಷರು ತಪೋನುಷ್ಠಾನಗೈದ ತಪಃಪ್ರಭಾವಲಯ ಭಕ್ತರನ್ನು ಪುನೀತರನ್ನಾಗಿ ಮಾಡುವ ತಾಣವಾಗಿತ್ತು. ಶ್ರೀ ತೋಂಟದ ಸಿದ್ಧಲಿಂಗೇಶ್ವರರು ಧರ್ಮ ಪ್ರಚಾರಗೈದು ಸಂಚಾರ ಮಾಡುತ್ತಾ ಶ್ರೀ ಸಿದ್ಧಗಂಗೆಗೆ ಬಂದು ಅನುಷ್ಠಾನಗೈದು ತಪೋನುಷ್ಠಾನದ ಅಮುಕ್ತ ಕ್ಷೇತ್ರವನ್ನಾಗಿ ಪರಿಶ್ರಮಿಸಲು ಕಾರಣ ವಾಯಿತು. ಆ ಕಾರಣದಿಂದ ನಾಡಿನ ಅನೇಕ ಮಂದಿ ಭಕ್ತವೃಂದವು ತಮ್ಮ ಕಷ್ಟಕಾರ್ಪಣ್ಯವನ್ನು ನೀಗಿಕೊಂಡು ಇಷ್ಟಾರ್ಥವನ್ನು ಪೂರೈಸಿಕೊಳ್ಳುವ ಸಲುವಾಗಿ ಸಿದ್ಧಗಂಗೆ ರಾಜ್ಯದ ಅಷ್ಟೇ ಅಲ್ಲ ; ನೆರೆ ರಾಜ್ಯದಿಂದಲೂ ಶ್ರೀ ಸಿದ್ಧಗಂಗೆಗೆ ಬಂದು ಪುಣ್ಯಭಾಜನರಾಗುತ್ತಿದ್ದರು. ಈ ಪವಿತ್ರ ಕ್ಷೇತ್ರ ಶ್ರೀ ಅಡವೀಸ್ವಾಮಿಗಳವರ ಶಿವಯೋಗ ಸಿದ್ಧಿಯ ಫಲವನ್ನು ಶ್ರೀಸಾಮಾನ್ಯನಿಗೆ, ಸಮಾಜದ ಒಳಿತಿಗೆ ವಿನಿಯೋಗಿಸಿ ಸೇವೆ ಮಾಡುವ ಸದಾವಕಾಶ ದೊರೆತುದಕ್ಕೆ ಸಮಧಾನವುಂಟಾಯಿತು. ಸಮಾಜ ಸುಧಾರಣೆಗೆ ಬೇಕಾದ ಅನೇಕ ಕಾರ್ಯಚಟುವಟಿಕೆಗಳನ್ನು ಕಾರ್ಯರೂಪಕ್ಕೆ ತಂದರು. ಶ್ರೀ ಸಿದ್ಧಗಂಗಾ ಕ್ಷೇತ್ರದ ಪುಣ್ಯ ಪಾವಿತ್ರ್ಯತೆ ಪ್ರತಿಷ್ಠೆಗಳು ಬೆಳಗಲು ಕಾರಣರಾದರು.

ಶ್ರೀ ಅಡವೀಸ್ವಾಮಿಗಳವರು ಮೂಲತಃ ಉತ್ತರ ಕರ್ನಾಟಕದವರು. ತಪಸ್ಸಾಮ್ರಾಜ್ಯ ಸಿದ್ಧಿ ಪಡೆದ ಅಂಕಲಿ ಕ್ಷೇತ್ರದ ಸಿದ್ಧೇಶ ಗುರುಗಳ ಆಶ್ರಯದಲ್ಲಿದ್ದು ಷಡುಸ್ಥಲ ಸಿದ್ಧಾಂತ ಸಂಪನ್ನರಾದ ಶಿವಯೋಗಿಗಳಿವರು. ಶಿವಸಿದ್ಧಾಂತ ಸಾರವನ್ನು ಆಳ ವಿಸ್ತಾರವನ್ನು ಅರಗಿಸಿ ಕೊಂಡವರು. ಲಿಂಗಪೂಜಾನಿಷ್ಠಗರಿಷ್ಠರು. ಸ್ವಾನುಭವ ಸಿದ್ಧರು. ಜನಕಲ್ಯಾಣದಲ್ಲಿ ತಮ್ಮನ್ನು ಸಂಪೂರ್ಣವಾಗಿ ತೊಡಗಿಸಿಕೊಳ್ಳಲು, ಚರಜಂಗಮ ತತ್ತ್ವನಿಷ್ಠರಾಗಿ, ಜಂಗಮ ಜ್ಯೋತಿಯಾಗಿ ಸಂಚಾರವನ್ನು ಕೈಗೊಂಡರು. ರಾಷ್ಟ್ರದ, ರಾಜ್ಯದ ಅನೇಕ ಪುಣ್ಯಕ್ಷೇತ್ರಗಳು, ಜಾಗೃತ ಸ್ಥಾನಗಳು, ದೇವಾಲಯ ಮಠಮಂದಿರಗಳು, ಪವಿತ್ರ ಕ್ಷೇತ್ರಗಳಲ್ಲಿ ಸಂಚರಿಸಿ ಅಪಾರ ಲೋಕಾನುಭವ ಸಂಪನ್ನರಾಗಿದ್ದರು. ವಯೋವೃದ್ಧರು, ಅನುಭಾವವೃದ್ಧರು, ಜ್ಞಾನವೃದ್ಧರೂ, ತಪೋವೃದ್ಧರು ಆದ ಶ್ರೀ ಅಡವೀಸ್ವಾಮಿಗಳು ತಮ್ಮ ಇಳಿ ವಯಸ್ಸಿನಲ್ಲಿ ತುಮಕೂರು ಜಿಲ್ಲೆಯನ್ನು ಆಯ್ಕೆ ಮಾಡಿಕೊಂಡು ತಮ್ಮ ಅಂತಿಮ ದಿನಗಳನ್ನು ಇಲ್ಲಿಯೇ ಕಳೆದರು. ಅವರ ಆತ್ಮಜ್ಯೋತಿ ಪರಂಜ್ಯೋತಿಯಲ್ಲಿ ೧೯೧೧ರಲ್ಲಿ ಐಕ್ಯ ವಾಯಿತು. ಅವರ ಕ್ರಿಯಾ ಸಮಾಧಿ ಚಿಕ್ಕತೊಟ್ಲುಕೆರೆ ಕ್ಷೇತ್ರದ ಓಂಕಾರ ಸ್ವಾಮಿಗಳ ಮತ್ತು ಜಡೆಸ್ವಾಮಿಗಳ ಸಿದ್ಧರಲ್ಲಿ

* ನಿವೃತ್ತ ಪ್ರಾಚಾರ್ಯರು, ಶ್ರೀ ಸಿದ್ಧಲಿಂಗೇಶ್ವರ ವೇದ-ಸಂಸ್ಕೃತ ಕಾಲೇಜು, ಶ್ರೀ ಸಿದ್ಧಗಂಗಾಮಠ.

ಗದ್ದುಗೆಯ ಪಕ್ಕದಲ್ಲಿ ಮಾಡಲಾಯಿತು. ಅವರ ತೋರ್ಗದ್ದುಗೆಗಳನ್ನು ಗುಬ್ಬಿ ತೋರೆಮಠದಲ್ಲಿ ಮತ್ತು ಸಿದ್ಧಗಂಗೆಯಲ್ಲಿ ಮಾಡಲಾಗಿದೆ.

ಶ್ರೀ ಅಡವೀಸ್ವಾಮಿಗಳು ಶ್ರೀ ಸಿದ್ಧಗಂಗಾಮಠದಲ್ಲಿ ಪೂಜಾನುಷ್ಠಾನ ಮಾಡಿಕೊಂಡು '**ಮೂರುಕಾಲ ಲಿಂಗಪೂಜೆ ಆರುಸ್ಥಲದ ಸಾವಧಾನ**' ಎಂಬಂತೆ ತ್ರಿಕಾಲ ಪೂಜಾನಂದದಲ್ಲಿದ್ದು ಷಟ್ಸ್ಥಲಾತ್ಮಕ ಸಾಧನಾ ಪಥದಲ್ಲಿ ಸಿದ್ಧಿ ಪಡೆದ ಯೋಗಿವರ್ಯರಾಗಿದ್ದರು. ಅವರ ವಾಸ್ತವ್ಯ ಶ್ರೀ ಸಿದ್ಧಗಂಗೆಯಲ್ಲಿದ್ದರೂ ಗುಬ್ಬಿಯ ತೋರೆಮಠಕ್ಕೆ ಮತ್ತು ಚಿಕ್ಕತೊಟ್ಟಿಲುಕೆರೆ ಮಠಕ್ಕೆ ಹೋಗಿ ಬಂದು ಆ ಎರಡೂ ಕಡೆ ಅಭಿವೃದ್ಧಿ ಕಾರ್ಯವನ್ನು ನೋಡಿಕೊಳ್ಳುತ್ತಿದ್ದರು. ಗುಬ್ಬಿಯಲ್ಲಿ ,ಪಾಪನಾಶಿನಿ ತೀರ್ಥದ ನಿರ್ಮಾಣ ಮಾಡಿಸಿದರು. ಗುಬ್ಬಿಯ ಕ್ಷೇತ್ರಾಧಿಪತಿ ಶ್ರೀ ಗೋಸಲ ಚನ್ನಬಸವೇಶ್ವರಸ್ವಾಮಿಯ ಉತ್ಸವಕ್ಕೆ ಬೆಳ್ಳಿಪಲ್ಲಕ್ಕಿ ನಿರ್ಮಾಣ ಮಾಡಲು ಭಕ್ತರಿಂದ ಬೆಳ್ಳಿ ಸಂಗ್ರಹ ಮಾಡಿದರು. ಆದರೆ ಬೆಳ್ಳಿ ಪಲ್ಲಕ್ಕಿ ಉತ್ಸವ ನೋಡುವ ಸುಯೋಗ ಮಾತ್ರ ಅವರಿಗೆ ದೊರೆಯಲಿಲ್ಲ. ಅದಲ್ಲದೆ ಗುಬ್ಬಿ ತೋರೆಮಠಕ್ಕೆ ಮರಿದೇವರನ್ನು ನೇಮಕ ಮಾಡಿದರು. ಚಿಕ್ಕತೊಟ್ಟಿಲು ಮಠಕ್ಕೂ ಮರಿದೇವರನ್ನು ನೇಮಕ ಮಾಡಿ ಅವೆರಡೂ ಮಠಗಳ ಜವಾಬ್ದಾರಿಯನ್ನು ಅವರಿಗೆ ನೋಡಿಕೊಳ್ಳಲು ವಹಿಸಿದರು.

ಶ್ರೀ ಅಡವೀಸ್ವಾಮಿಗಳವರ ಪ್ರಧಾನ ಕಾರ್ಯ ಕ್ಷೇತ್ರ ಸಿದ್ಧಗಂಗೆಯೇ ಆಯಿತು. ಇಲ್ಲಿ ಶಿವಯೋಗಾನುಷ್ಠಾನದ ಜೊತೆಗೆ ಕೆಲವು ಕಾರ್ಯ ಚಟುವಟಿಕೆಗಳನ್ನು ಜನೋಪಯೋಗಕ್ಕಾಗಿ ಪ್ರಾರಂಭಮಾಡಿದ ಕೀರ್ತಿ ಶ್ರೀ ಅಡವೀಸ್ವಾಮಿಗಳಿಗೆ ಸಲ್ಲುತ್ತದೆ. ಸಿದ್ಧಗಂಗಾ ಮಠದಲ್ಲಿ ಅನೇಕ ಮಠಗಳ ವಟುಗಳು ಇದ್ದರು. ಅವರುಗಳಿಗೆ ಶಿವಯೋಗಾನುಷ್ಠಾನ ತರಬೇತಿ ಜೊತೆಗೆ ವೀರಶೈವ ಸದಾಚಾರಕ್ಕೆ ಶಾಸ್ತ್ರಾಧ್ಯಯನಕ್ಕೆ ಬೇಕಾದ ಶಿಕ್ಷಣವನ್ನು ಕೊಡುವ ವ್ಯವಸ್ಥೆಯನ್ನು ಮಾಡಿದರು. ಮತಕೂರು ನಂಜುಂಡಶಿವಯೋಗಿಗಳಂತಹ ಘನ ವಿದ್ವಾಂಸರಿಂದ ವೇದ-ಸಂಸ್ಕೃತ ಶಿಕ್ಷಣವನ್ನು ಕೊಡಿಸುತ್ತಿದ್ದರು. ಮಠಗಳಿಗೆ ವಟುಗಳಾಗುವವರಿಗೆ ಬೇಕಾದ ಲಿಂಗಪೂಜಾ ನಿಷ್ಠೆ, ನೈಷ್ಠಿಕ ಬ್ರಹ್ಮಚರ್ಯೆ, ವೀರಶೈವ ದರ್ಶನ, ಶಾಸ್ತ್ರಾಧ್ಯಯನ ಮತ್ತು ಸಮಾಜ ಸೇವಾಜೀವನದ ತರಬೇತಿಯನ್ನು ಕೊಡಿಸುತ್ತಿದ್ದರು. ಹೀಗಾಗಿ ಶ್ರೀ ಸಿದ್ಧಗಂಗಾ ಮಠವೂ ೧೮ನೆಯ ಶತಮಾನದಿಂದಲೂ ಅನೇಕ ಮಠಾಧಿಪತಿಗಳಿಗೆ ನೂರಾರು ಹರಗುರುಚರಮೂರ್ತಿಗಳಿಗೆ ಆಶ್ರಯ ನೀಡಿ ಶಿವಯೋಗಾನುಷ್ಠಾನಕ್ಕೆ ತರಬೇತಿ ನೀಡಿದ ಗುರುಕುಲವಾಗಿದೆ. ಶ್ರೀಮಠದಲ್ಲಿ ವಾಸ್ತವ್ಯ ಮಾಡಿದ ಅಧ್ಯಾಪಕರು, ವಟುಗಳಿಗೆ ದಾಸೋಹ ವ್ಯವಸ್ಥೆಯನ್ನು ಮಾಡಿದರು. ಜೊತೆಗೆ ಶ್ರೀ ಸಿದ್ಧಲಿಂಗೇಶ್ವರರ ಮತ್ತು ಶ್ರೀಮಾತೆ ಗಂಗಾದೇವಿಯವರ ದರ್ಶನ ಪೂಜಾ ಕೈಂಕರ್ಯಕ್ಕೆ ಬಂದ ಭಕ್ತಾದಿಗಳಿಗೆ ಉಚಿತ ಪ್ರಸಾದ ದಾಸೋಹದ ವ್ಯವಸ್ಥೆಯನ್ನು ಆರಂಭಿಸಿದರು. ಅವರು ಅಂದು ಹಚ್ಚಿದ ದಾಸೋಹದ ಬೆಂಕಿ ಇಂದಿಗೂ ಆರದೆ ಜ್ವಾಜ್ವಲ್ಯಮಾನವಾಗಿ ಉರಿದು ಹಸಿದ ಹೊಟ್ಟೆಯ ಕಿಚ್ಚನ್ನು ನಂದಿಸಿದ ಕೀರ್ತಿ ಶ್ರೀ ಅಡವೀಶರ ತಪೋಪ್ರಭಾವವೆಂದೇ ಹೇಳಬೇಕು.

ಶ್ರೀ ಸಿದ್ಧಗಂಗಾಕ್ಷೇತ್ರ ಸಿದ್ಧರ ನೆಲೆಬೀಡು. ಸಿದ್ಧತಪಸ್ವಿಗಳ ಅವಿಮುಕ್ತ ಕ್ಷೇತ್ರ. ಗುರು ಗೋಸಲಸಿದ್ಧೇಶ್ವರರು ತಮ್ಮ ನೂರೊಂದು ವಿರಕ್ತರೊಡಗೂಡಿ ಲಿಂಗಾನುಷ್ಠಾನ ಮಾಡಿದರು. ತಪಃಸಿದ್ಧಿಫಲವಾಗಿ ಇಲ್ಲಿ ಗಂಗೋದ್ಭವ ಮಾಡಿದರು. ಇಲ್ಲಿನ ನೆಲ ಜಲವನ್ನು ಪಾವನಗೊಳಿಸಿದರು. ತಪೋನುಷ್ಠಾನಕ್ಕೆ ಯೋಗ್ಯವಾದ ನೂರಾರು ಗುಹೆಗಳಲ್ಲಿ ವ್ಯಕ್ತಿಗತವಾದ ಶಿವಯೋಗ ಸಿದ್ಧಿಯನ್ನು ಪಡೆವ ಸಿದ್ಧರಿಗೆ ಮಾರ್ಗದರ್ಶಕರಾದರು. ಇಲ್ಲಿಯೇ ಶಿವಯೋಗ ಸಮಾಧಿಯಿಂದ ಲಿಂಗದಲ್ಲಿ ಲೀನವಾದರು. ನಂತರ ಬಂದ ಹರದನಹಳ್ಳಿಯ ಶೂನ್ಯಪೀಠ ಪರಂಪರೆಯ ಶ್ರೀ ಶಂಕರದೇವರು ಶ್ರೀ ದಿವ್ಯಲಿಂಗದೇವರು ಗೋಸಲ ಸಿದ್ಧೇಶ್ವರ ಶಿಷ್ಯರಾದ ಶ್ರೀ ಗೋಸಲ ಚನ್ನಬಸವೇಶ್ವರರು ಇಲ್ಲಿ ತಪಸ್ಸನ್ನಾಚರಿಸಿ ಇಲ್ಲಿ ತಪೋನುಷ್ಠಾನ ಮಾಡಿದ್ದಾರೆ. ಶ್ರೀ ತೋಂಟದ ಸಿದ್ಧಲಿಂಗೇಶ್ವರರು ಅತ್ಯಂತ ಪ್ರಭಾವಶಾಲಿಗಳು, ಮಹಿಮಾಪುರುಷರು, ಶಿವಾನುಭವ ವಿದ್ಯಾವಿಶಾರದರೂ, ವಚನಶಾಸ್ತ್ರರಚನಾಕಾರರು, ದಿವ್ಯ ಶಿವಯೋಗಸಿದ್ಧರು. ಶಿವಯೋಗ ಸಾಧನೆಯ ಸಿದ್ಧಿಪಡೆದ





ಈಶ ಒಡೆಯನಂತಿದ್ದ ಸಿದ್ಧಲಿಂಗೇಶ್ವರರು ಸ್ವಯಂ ಸಿದ್ಧರಲ್ಲಿ ಈಶರಾದ ಸಿದ್ಧೇಶ್ವರರು. ತಮ್ಮ ಅಖಂಡ ತಪಃ ಸಿದ್ಧಿಯಿಂದ ಶ್ರೀ ಸಿದ್ಧಗಂಗಾ ಕ್ಷೇತ್ರ ಹಲವು ಶಿವಯೋಗಿ ಗಳ ತಪಃ ಸಂಚಯದಿಂದ ತಪಃಪ್ರಭಾವಲಯ ಕ್ಷೇತ್ರ ಕ್ಕೊಂದು ಪುಷ್ಟಿತುಷ್ಟಿ ತುಂಬಿ ತೇಜಃಪುಂಜವಾಗಿ ಅತ್ಯದ್ಭುತ ತಪಃಪ್ರಭೆಯ ಭೂಮಿಯಾಯಿತು. ಇಂತಹ ತಪೋಭೂಮಿಯು ಶ್ರೀ ಅಡವೀಶ್ವರರ ಸಿದ್ಧಿಯ ತಾಣವಾದುದರಲ್ಲೇನಾಶ್ಚರ್ಯ!.

ಶ್ರೀ ಸಿದ್ಧಗಂಗಾ ಮಠದ ಗುರುಪರಂಪರೆಯಲ್ಲಿ ಬಂದ ಶ್ರೀ ಗೋಸಲ ಸಿದ್ಧೇಶ್ವರರೇ ಮೊದಲಾದ ಶಿವಯೋಗ ಸಿದ್ಧರು, ಅಸಾಧಾರಣವಾದ ಸ್ವಯಂ ಪ್ರಬೋಧದ ಸ್ಫುರಣಾ ಶಕ್ತಿಸಂಪನ್ನರಾಗಿದ್ದರು. ಸಂಕಲ್ಪ ಮಾತ್ರದಿಂದ ಕಾರ್ಯಸಿದ್ಧಿಯೋಗದ ಶಕ್ತಿಸಂಚಯವುಳ್ಳವರಾಗಿದ್ದರು. ಸ್ವಯಂ ಸಿದ್ಧರಾದ ಶ್ರೀ ಅಡವೀ ಸ್ವಾಮಿಗಳು ಶ್ರೀ ಸಿದ್ಧಗಂಗೆಯನ್ನು ಆಯ್ಕೆ ಮಾಡಿಕೊಂಡು ಸಿದ್ಧರ ನೆಲೆವೀಡಿಗೊಂದು ಸಾರ್ಥಕ್ಯವನ್ನು ತಂದುಕೊಟ್ಟರು. ಸನಾತನವಾಗಿ ಬಂದ ಶಿವಯೋಗಸಿದ್ಧರ ಪರಂಪರೆಯನ್ನು ನಿರಂತರ ಸಾಗುವಂತೆ ವ್ಯವಸ್ಥೆ ಮಾಡಿದರು. ಮಹಾಮಹಿಮ ಶಾಲಿಗಳಾದ ಶ್ರೀ ಉದ್ದಾನ ಶಿವಯೋಗಿಗಳನ್ನು ಶ್ರೀ ಸಿದ್ಧಗಂಗಾ ಮಠದ ಉತ್ತರಾಧಿಕಾರಿಗಳೆಂದು ನೇಮಕ ಮಾಡಿದ್ದಲ್ಲದೆ ೧೯೦೧ ರಲ್ಲಿ ಶ್ರೀಮಠದ ಸರ್ವಾಧ್ಯಕ್ಷರನ್ನಾಗಿ ಮಾಡಿದರು. ಸಿದ್ಧಶಿವಯೋಗದ ದಿವ್ಯದೀವಿಕೆಯಲ್ಲಿ ಬೆಳಗಿ ರಾರಾಜಿಸುವಂತೆ ಮಾಡಿದರು.

## ಧವಳ ಶಿಖರ

ನುರಿತ ಬಾಳು ನೂರು ವರುಷ ದಾಟಿ ಮುನ್ನಡೆದಿದೆ
ಅರಿವಿನ ಹೊಳೆಯ. ಒಳ ಅರಿವು ಹೆಚ್ಚುತ್ತಾ ನಿರಂತರ
ಹರಿಯುತಿದೆ, ಇದು ಎಂಥ ಭಾಗ್ಯವಯ್ಯಾ !
ಈ ಅಮೃತವನ್ನು ಹನಿ ಹನಿಯಾಗಿ ಹನಿಸುತಿಹರು
ನಮ್ಮ ದೇವರು

ನಿತ್ಯ ನಿರಂತರ ಕಾಯಕಯೋಗಿ
ಶ್ರೀ ಗುರು ಶಿವಸಿದ್ಧಗಂಗಾಧೀಶ

* * *

ತ್ರಿವಿಧ ದಾನ ನೀಡಿ ಸನ್ಮಾನ ಬಯಸಲಿಲ್ಲ
ತಾ ಮಾಡಿದೆನೆಂದು ಎಗ್ಗಿನಿಂದ ಬೀಗಲಿಲ್ಲ
ಪಡೆದದ್ದನ್ನು ಸಕಲರಿಗೂ ಹಂಚುವುದಷ್ಟೇ ತಮ್ಮ
ಕೆಲಸವೆಂದರು
ಕೊಡುವ ದೇವನೊಬ್ಬ ಮೇಲಿರಲು 'ಸರ್ವ ಶಿವಾರ್ಪಣಾಮಸ್ತು'
ನಿತ್ಯ ನಿರಂತರ ಕಾಯಕಯೋಗಿ
ಶ್ರೀ ಗುರು ಶಿವಸಿದ್ಧಗಂಗಾಧೀಶ

ಕೊಟ್ಟವನು ದಾನಿಯಲ್ಲ, ಪಡೆದವನು ದೀನನಲ್ಲ
ಮನುಕುಲದ ಹಿತಚಿಂತನೆಯೇ ಮಾನವೀಯತೆ ಕಾಣಿರೋ
ಕೊಟ್ಟು ಪಡೆದು, ಪಡೆದು-ಕೊಟ್ಟು ಸಂಬಂಧಗಳು ಗಟ್ಟಿಯಾಗಿಸಿ
ಮುತ್ತುರತ್ನ ಕೋದಂತೆ ಪ್ರಕೃತಿಯ ಸುಂದರ ಮಾಲೆಯಾಗಿಹರು
ನಿತ್ಯ ನಿರಂತರ ಕಾಯಕಯೋಗಿ
ಶ್ರೀ ಗುರು ಶಿವಸಿದ್ಧಗಂಗಾಧೀಶ

* * *

ವಿಶ್ವ ಒಂದೇ, ಕಾಣುವ ಕನಸುಗಳು ಅಗಣಿತ
ಸಾಕಾರಕ್ಕೆ ಸತತ ಪರಿಶ್ರಮವಿರಲಿ, ನಾವು,
ನಮ್ಮದು, ನಮ್ಮವರು ಎನ್ನುವ ಐಕ್ಯತೆಯ
ಮಮಕಾರ ತೋರಿದ ಸಮಚಿತ್ತ ವಿಶ್ವ ಕುಟುಂಬಿ
ನಿತ್ಯ ನಿರಂತರ ಕಾಯಕಯೋಗಿ
ಶ್ರೀ ಗುರು ಶಿವಸಿದ್ಧಗಂಗಾಧೀಶ

-ಶ್ರೀಮತಿ ಚಂದ್ರಕಾಂತಿ ಕಾಶೀನಾಥ್
ಶಿವಮೊಗ್ಗ



# ಶಿವಯೋಗಿಯ ಅವತಾರ ಸಾಮಾನ್ಯವೇ?

-ಕೋ.ರಂ. ಬಸವರಾಜು *



ಒಬ್ಬ ಮಹಾಶಿವಯೋಗಿಯ ದಿವ್ಯಬದುಕನ್ನು ಸ್ಥಲ ತ್ರಯಗಳಲ್ಲಿ ಅಧ್ಯಯನ ಮಾಡಬೇಕಾಗುವುದು. ಅವುಗಳೇ **ವಿಭೂತಿಸ್ಥಲ, ಅನುಭೂತಿಸ್ಥಲ, ದಿವ್ಯಾನುಭೂತಿ ಸ್ಥಲಗಳು.** ಪ್ರಸ್ತುತ ಶ್ರೀಮದುದ್ದಾನ ಶಿವಯೋಗಿಗಳ ದಿವ್ಯಬದುಕಿನಲ್ಲಿ ಲಕ್ಕೂರಿನ ರುದ್ರಪ್ಪನವರು ಮನೆಮಾರು ಬಿಟ್ಟು ಸಿದ್ಧಗಂಗೆಗೆ ಬರುವ ತನಕ ವಿಭೂತಿಸ್ಥಲವೆಂದೂ, ರುದ್ರಪ್ಪ ಉದ್ದಾನಪ್ಪನಾಗಿ ಸಿದ್ಧಗಂಗೆಯ ಸಮಸ್ತ ಹೊಣೆಯನ್ನು ಹೊರುವತನಕ ಅನುಭೂತಿಸ್ಥಲವೆಂದೂ, ಮುಂದೆ ಲೋಕಪೂಜೆಗೆ ಯೋಗ್ಯವಾಗುವಂಥ ಮಂಗಳಮಹಾಮೂರ್ತಿಯನ್ನು ಲೋಕಾರ್ಪಣೆ ಮಾಡುವ ತನಕ ದಿವ್ಯಾನುಭೂತಿಸ್ಥಲವೆಂದು ಸ್ಥೂಲವಾಗಿ ಹೇಳಬಹುದು.

**ವಿಭೂತಿಸ್ಥಲ :** ವಿಭೂತಿ ಎಂದರೆ ಶಿವಸಂಪದ. ಇಂಥ ಸಂಪದ್ಭರಿತ ವ್ಯಕ್ತಿಗಳನ್ನು ಶಿವಾಂಶಸಂಭೂತರೆಂದೂ ವಿಭೂತಿ ಪುರುಷರೆಂದೂ ಕರೆಯುತ್ತಾರೆ. ಶ್ರೀಮದುದ್ದಾನಶಿವಯೋಗಿಗಳೂ ಇಂಥ ವಿಭೂತಿ ಪುರುಷರಾಗಿದ್ದರು. ವಿಭೂತಿಪುರುಷರ ಲೋಕಾವತಾರ ಸಾಮಾನ್ಯಸಂಗತಿಯಲ್ಲ. ಜನಮನದ ಶುದ್ಧ ಸಂಕಲ್ಪಶಕ್ತಿ ಮತ್ತು ಬಹುಕಾಲದ ಜನತೆಯ ನೋಂಪಿಯ ಫಲ. ಇವು ಒಟ್ಟಿಗೆ ಸೇರಿ ಮಹಾಯೋಗವಾಗಿ ಮಹಾ ಶಿವಯೋಗಿಯು ಅವತಾರಕ್ಕೆ ಕಾರಣವಾಗುತ್ತದೆ.

ಸು. ೧೮೬೦ ರಲ್ಲಿ ಲಕ್ಕೂರಿನ ಪಟೇಲ್ ಗಟ್ಟಪ್ಪ-ಮರುಳಸಿದ್ಧಮ್ಮನವರ ಗರ್ಭಾಂಬುಧಿಯಲ್ಲಿ ಬೋಳಬಸವನ ಸುಪ್ರಸಾದದಿಂದ ಕಾರಣಿಕ ಶಿಶು ಭುವಿಗೆ ಅವತರಿಸುತ್ತದೆ. ಅವರೇ ರುದ್ರಪ್ಪ. ಮರುಗದಂತೆ ಹುಟ್ಟುತ್ತಲೇ ಶಿವಯೋಗಿಯಾದ ರುದ್ರಪ್ಪ ತನ್ನ ಅವತಾರ ಲೀಲೆಯನ್ನು ಜಗಕೆ ಅರುಹುವಂತೆ ಮೇಕೆ ಕಾಯುವ ನೆಪದಲ್ಲಿ ಪಶುಪತಿಯಾಗಿ ಸಿದ್ಧಪುರುಷನಾಗಿ ಸಿದ್ಧಗಂಗೆಗೆ ಬರುತ್ತಾರೆ.

**ಅನುಭೂತಿಸ್ಥಲ :** ರುದ್ರಪ್ಪನು ಸಿದ್ಧಗಂಗೆಗೆ ಬಂದು ತಮ್ಮ ಸೇವೆಯಲ್ಲಿ ನಿಂದ ದಿನದಿಂದಲೇ ಶ್ರೀಅಟವೀಶ್ವರರು ಆ ರುದ್ರಪ್ಪನಲ್ಲಿ ವಿಭೂತಿ ತತ್ತ್ವವನ್ನು ಗುರುತಿಸುತ್ತಾರೆ. ಅದರಂತೆ ದಿನೇ ದಿನೇ ರುದ್ರಪ್ಪನ ಅಂತರಂಗದಲ್ಲಿ ಅರಳುತ್ತಿರುವ ಯೋಗಶಕ್ತಿ ಪ್ರಕಟಗೊಳ್ಳುವ ಸಂದರ್ಭಗಳೂ ಹುಡುಕಿಕೊಂಡು ಬರುತ್ತವೆ. ಶಿಷ್ಯನಾಗಿ ಪ್ರಸಾದವನ್ನು ಪಾಕ ಮಾಡಿ ನೀಡಿದ ಅವನ ಹಸ್ತಗುಣದಿಂದ ಬಹಳ ಕಾಲದಿಂದಲೂ ಕಾಲೂರಿದ್ದ ಅಟವೀಶರ ಅಸ್ತಮರೋಗ ಸಂಪೂರ್ಣವಾಗಿ ನಿವಾರಣೆ ಯಾಗುತ್ತದೆ. ಇನ್ನು ರುದ್ರಪ್ಪ ಉದ್ದಾನಪ್ಪನಾದ ಪ್ರಸಂಗವಂತೂ ಈ ಸ್ಥಲದ ಮುಖ್ಯ ಘಟ್ಟವಾಗಿದೆ. ಹಾಸನ ಜಿಲ್ಲೆಯ ತೋಟದಗದ್ದೆ ಎಸ್ಟೇಟಿನ ಶ್ರೀ ದೇವಪ್ಪಗೌಡರೆಂಬುವರಿಗೆ ಬ್ರಹ್ಮಪಿಶಾಚಿ ಹಿಡಿಯಿತು. ನನ್ನ ಗುರುವು ಸಿದ್ಧಗಂಗೆಯಲ್ಲಿದ್ದಾನೆ, ನನ್ನನ್ನು ಅಲ್ಲಿಗೆ ಕರೆದುಕೊಂಡು ಹೋಗಿ ಎಂದು ಹೇಳಿತು. ಅದರಂತೆ ಸಿದ್ಧಗಂಗೆಗೆ ಕರೆತಂದು ಶ್ರೀ ಅಟವೀಶ್ವರರ ಎದುರಿಗೆ ನಿಲ್ಲಿಸಿದರು. ಆಗ ಅವರನ್ನು ನೋಡಿ **'ಇವರು ನನ್ನ ಗುರುವಲ್ಲ'** ಎಂದು ಹೇಳಿ ಗರಕ್ಕನೆ ತಿರುಗಿ ಹಿಂದು ಮುಂದಾಗಿ ನಿಂತುಬಿಟ್ಟಿತು. ಅಷ್ಟರಲ್ಲಿ ಆ ಕಡೆಯಿಂದ ರುದ್ರಪ್ಪ ಸೌದೆ ಗಾಡಿಯನ್ನು ಹೊಡೆದುಕೊಂಡು ಬರುತ್ತಿದ್ದರು. ಅವರನ್ನು ನೋಡಿದ ತಕ್ಷಣವೇ **'ಅಗೋ! ನನ್ನ ಗುರುಬಂದ'** ಎಂದು ಕೂಗುತ್ತಾ ಓಡಿ ಹೋಗಿ ಗಾಡಿಯ ಮೇಲಿದ್ದ ರುದ್ರಪ್ಪನ ಪಾದಗಳನ್ನು ಗಟ್ಟಿಯಾಗಿ

* ನಿವೃತ್ತ ಪ್ರಾಧ್ಯಾಪಕರು, ಶ್ರೀ ಸಿದ್ಧಲಿಂಗೇಶ್ವರ ವೇದ-ಸಂಸ್ಕೃತ ಕಾಲೇಜು, ಶ್ರೀಸಿದ್ಧಗಂಗಾಮಠ.







ಹಿಡಿದು **'ಗುರುವೇ, ಪಾಹಿಮಾಂ ರಕ್ಷಮಾಂ'** ಎಂದು ಹೇಳುತ್ತಾ ಗಟ್ಟಿಯಾಗಿ ಅಳತೊಡಗಿತು. ತನ್ನ ಜನ್ಮಾಂತರದ ಕಥೆಯನ್ನೆಲ್ಲಾ ಹೇಳತೊಡಗಿತು ಮತ್ತು ರುದ್ರಪ್ಪನ ಪಾದಸ್ಪರ್ಶ ಮಾತ್ರದಿಂದಲೇ ಪಿಶಾಚಭಾವ ತೊಲಗಿತು. ಈ ದೃಶ್ಯವನ್ನು ನೋಡಿ ಅಟವೀಸ್ವಾಮಿಗಳು ಅವಾಕ್ಕಾದರು. ಮತ್ತು ಈತನೇ ಶ್ರೀಮಠದ ಅಧ್ಯಕ್ಷನು ನಾನು ಈ ಕ್ಷೇತ್ರದ ಪ್ರತಿನಿಧಿ ಮಾತ್ರ ಎಂದು ತೀರ್ಮಾನಿಸಿ ರುದ್ರಪ್ಪನನ್ನೇ ಶ್ರೀಮಠದ ಅಧಿಪತಿಯನ್ನಾಗಿ ಮಾಡಿ ಉದ್ದಾನಪ್ಪನೆಂಬ ಸಾರ್ಥಕ ಅಭಿದಾನವಿಟ್ಟು ಲೋಕಕ್ಕೆ ಅರ್ಪಿಸುತ್ತಾರೆ. **'ಉದ್ದಾನ'** ಎಂದರೆ ಉತ್+ದಾನ. ಉತ್= ಶ್ರೇಷ್ಠವಾದ ದಾನ= ಅನ್ನದಾನ, ವಿದ್ಯಾದಾನ, ಅಭಯದಾನವನ್ನು ಮಾಡುವವನಾದ್ದರಿಂದ **'ಉದ್ದಾನ'** ಎಂಬುದು ಅಟವೀಶರ ಅಭಿಪ್ರಾಯವಾಗಿತ್ತು.

**ದಿವ್ಯಾನುಭೂತಿಸ್ಥಲ :** ಮುಂದೆ ಶ್ರೀಮದುದ್ದಾನ ಶಿವಯೋಗಿಗಳು ಶ್ರೀಮಠದ ಅಧಿಪತಿಯಾದ ನಂತರದಲ್ಲಿ ಮಠದ ಅಭಿವೃದ್ಧಿ ಕಾರ್ಯಗಳು ಸುವೇಗವಾಗಿ ಬೆಳೆದವು. ಆ ಕಾಲಕ್ಕೆ ಸರ್ವಜನಾಂಗಕ್ಕೂ ಉಚಿತ ವಿದ್ಯಾರ್ಥಿನಿಲಯವನ್ನೂ ಸಂಸ್ಕೃತ ಪಾಠಶಾಲೆಯಲ್ಲೂ ಸ್ಥಾಪಿಸಿ ನಾಡಿನ ಮಠಾಧಿಪತಿಗಳಿಗೆ ಮಾರ್ಗದರ್ಶಕರಾದರು. ೧೯೪೦ರಲ್ಲೇ ಜಾತ್ರೆಯನ್ನು ಜಾರಿಗೆ ತಂದರು. ಗ್ರಾಮಾಂತರ ಪ್ರದೇಶಗಳಲ್ಲಿ ಶಾಲೆಗಳನ್ನು ಸ್ಥಾಪಿಸಿದರು. ಇದರ ಜೊತೆಗೆ ಲೋಕಸಂಗ್ರಹಕ್ಕಾಗಿ, ಲೋಕಕಲ್ಯಾಣಕ್ಕಾಗಿ ಅನಂತ ಲೀಲೆಗಳನ್ನು ಪವಾಡಗಳನ್ನು ಮೆರೆದರು. ಅಂತಹ ಪವಾಡಗಳಲ್ಲಿ ಲೋಕಪೂಜಾರ್ಹವಾದ ಮಂಗಳ ಮಹಾಮೂರ್ತಿ ಶ್ರೀ ಶ್ರೀ ಶಿವಕುಮಾರಮಹಾಸ್ವಾಮಿಗಳವರನ್ನು ಕಡೆದು ನಿಲ್ಲಿಸಿದ್ದು ಬಹಳ ಮುಖ್ಯ. ಹನ್ನೊಂದು ವರ್ಷಗಳ ಕಾಲ ಕಡೆದು ಪ್ರಾಣಲಿಂಗ ಕೊಟ್ಟು, ನಡೆದಾಡುವ ದೇವರನ್ನಾಗಿಸಿದ ಪವಾಡ ಅದ್ಭುತಾನಾಂ ಅದ್ಭುತ. ಅದೊಂದು ಮಹಾನುಗ್ರಹಲೀಲೆ.

ದಿನಾಂಕ ೧೧-೦೧-೧೯೪೧ ಶನಿವಾರ ರಾತ್ರಿ ೧೧.೪೫ ಸಮಯ. ಶ್ರೀಗುರುವು ತನ್ನಂತರಂಗದ ಪ್ರಾಣಜ್ಯೋತಿಯನ್ನು ಶಿಷ್ಯನಂತರಂಗದಲ್ಲಿ ನೆಲೆಗೊಳಿಸುವ ಮಹಾಮೂರ್ತ. ಅಂದು ರಾತ್ರಿ ಶ್ರೀ ಉದ್ದಾನ ಶಿವಯೋಗಿಗಳು ಎಂದಿನಂತೆ ಆನಂದವಾಗಿ ಶಿವಾರ್ಚನೆಗೈದು ಇಷ್ಟಲಿಂಗದಲ್ಲಿ ಶಿವಕಳೆಯನ್ನು ಬೆರೆಸಿ ಮರ್ತ್ಯಲೋಕದ ಮಣಿಹವನ್ನು ಪೂರೈಸಿದ ಸಂದರ್ಭ. ಸುದ್ದಿ ಮುಂಚಿನಂತೆ ಹರಡಿ ಕ್ಷಣ ಮಾತ್ರದಲ್ಲಿ ಎಲ್ಲರೂ ನೆರೆಯುತ್ತಾರೆ. ಕೆಳಭಾಗದ ಹೊಸ ಮಠದಲ್ಲಿ ದಾಸೋಹ ಕಾರ್ಯದಲ್ಲಿ ನಿರತರಾಗಿದ್ದ ಶ್ರೀ ಶ್ರೀ ಶಿವಕುಮಾರಮಹಾಸ್ವಾಮೀಜಿಯವರು ಓಡೋಡಿ ಬಂದು ದುಃಖಭರಿತರಾಗಿ ಕೈಮುಗಿದುಕೊಂಡು ಪಾದದ ಬಳಿ ನಿಂತು ಪ್ರಾರ್ಥನೆ ಮಾಡುತ್ತಾರೆ. ಇತ್ತ ನೆರೆದವರೆಲ್ಲರೂ ಶಿವಯೋಗಿಗಳು ಇಹಲೋಕದ ಯಾತ್ರೆಯನ್ನು ಮುಗಿಸಿದರು, ಇನ್ನು ಕಣ್ಣು ತೆರೆಯುವುದಿಲ್ಲ ಎಂದು ನಿಶ್ಚಯಿಸಿದರು. ಆದರೆ ಸ್ವಲ್ಪ ಹೊತ್ತಿನಲ್ಲಿಯೇ ಉದ್ದಾನ ಶಿವಯೋಗಿಗಳು ತಮ್ಮ ಮುದ್ರಿತಲೋಚನವನ್ನು ನಿಧಾನವಾಗಿ ತೆರೆದು- ಮಹಾ ಶಿಲ್ಪಿಯು ತಾನು ಕಡೆದ ಮಂಗಳ ಮೂರ್ತಿಗೆ ಪ್ರಾಣ ಪ್ರತಿಷ್ಠಾಪಿಸುವಂತೆ ಕೀಲಿಸಿದ ದೃಷ್ಟಿಯಿಂದ ಶಿಷ್ಯ ಶಿವಕುಮಾರಮಹಾಸ್ವಾಮಿಗಳವರನ್ನು ನೋಡುತ್ತಾರೆ. ಎಲ್ಲರಿಗೂ ಪರಮಾಶ್ಚರ್ಯವಾಗುತ್ತದೆ. ಇದ್ದಕ್ಕಿದ್ದಂತೆ ಶಿವಯೋಗಿಗಳ ಅಗ್ನಿ ತತ್ತ್ವದ ನೇತ್ರ ದ್ವಾರಗಳಿಂದ ದಿವ್ಯತೇಜೋರಾಶಿ ಹೊರ ಹೊರಟು ಶಿಷ್ಯನ ನೇತ್ರದ್ವಾರಗಳ ಮೂಲಕ ಅಂತರಂಗವನ್ನು ಪ್ರವೇಶಿಸುತ್ತದೆ. ಆಗವರಲ್ಲಾದ ದಿವ್ಯಾನುಭೂತಿ ಶಬ್ದಾರ್ಥಕ್ಕೆ ಮೀರಿತ್ತು. ಗುರುಶಿಷ್ಯರೆಂಬ ಉಭಯಭಾವವಳಿದು ಶಿಷ್ಯನೇ ಗುರು ವಾಗುವ ಸಮುಹೂರ್ತವೊದಗಿತ್ತು. ಇದೇ ಮಹಾನುಗ್ರಹ ಲೀಲೆ. ಈ ಮಹಾನುಗ್ರಹ ಶಕ್ತಿಯಿಂದಲೇ ಪರಮಪೂಜ್ಯ ಶ್ರೀ ಶ್ರೀ ಶಿವಕುಮಾರಮಹಾಸ್ವಾಮಿಗಳವರು ಮಂಗಳಮಹಾಮೂರ್ತಿಯಾಗಿ, ನಡೆದಾಡುವ ದೇವರಾಗಿ, ನುಡಿದಾಡುವ ದೈವವಾಗಿ ಒಲಿದು ಕಾಯುವ ಅನಾಥ ರಕ್ಷಕರಾಗಿ ಕಂಗೊಳಿಸುತ್ತಾರೆ. ಇಂಥ ಶ್ರೀಗುರುವನ್ನು ಲೋಕಕ್ಕೆ ಅರ್ಪಿಸಿದ ಮಹಾಶಿವಯೋಗಿಯ ಅವತಾರ ಸಾಮಾನ್ಯವೇ?

ಅಯ್ಯಾ ! ಲೋಕದ ಭವರೋಗ ವೈದ್ಯರು ನೀವು
ನಿಮ್ಮ ನೋಡಲು ಹುಟ್ಟುಸಾವುಗಳಡಗುವುವು
ನಿಮ್ಮ ನುತಿಸಲು ಕಾಲಕರ್ಮಗಳು ಕರಗುವುವು
ನಿಮ್ಮ ಮುಟ್ಟಲು ಭೂತಚೇಷ್ಟೆಗಳು ಬಿಟ್ಟೋಡುವುವು
ನಿಮ್ಮ ನೆನೆಯಲು ಆಧಿ ವ್ಯಾಧಿಗಳು ಮಾಯವಾಗುವುವು
ನೋಡಾ ಶಿವಗುರು ಶ್ರೀ ಉದ್ದಾನೇಶ ಪ್ರಭುವೆ.



# ಬಸವಣ್ಣನವರ ಜೀವನ ದರ್ಶನ

–ಡಾ॥ ಆರ್.ಬಿ. ಚಿಲುಮಿ*

**'ಬಸವಣ್ಣನವರು ಒಬ್ಬ ವ್ಯಕ್ತಿಯಲ್ಲ ಒಂದು ಶಕ್ತಿ. ಅವರ ವ್ಯಕ್ತಿತ್ವವು ಬಹುಮುಖವಾದುದು'**– ಎಂದು ಹೇಳಿದ ಖ್ಯಾತ ಸಂಶೋಧಕ ಡಾ॥ ಚಿದಾನಂದಮೂರ್ತಿ ಅವರ ಮಾತು ನಿತ್ಯ ಸತ್ಯ. ಅವರು ವಿಶ್ವವಿಖ್ಯಾತ ವಿಭೂತಿಪುರುಷರಲ್ಲಿಯೇ ಅಗ್ರಗಣ್ಯರು ಎಂಬುದನ್ನು ಈ ಮಾತು ಸಾಬೀತು ಪಡಿಸುತ್ತದೆ. ಇಡೀ ವಿಶ್ವದಲ್ಲಿಯೇ ಬುದ್ಧ–ಮಹಾವೀರರ ತರುವಾಯ–ಕೇಳಿ ಬರುವ ಮಹಾತ್ಮನೆಂದರೆ ಜಗಜ್ಜ್ಯೋತಿ ಬಸವೇಶ್ವರ ಧರ್ಮ. ಆಧ್ಯಾತ್ಮ, ದೇವರು, ಕಾಯಕ, ದಾಸೋಹ, ಸರ್ವ ಸಮಾನತೆ, ಎಲ್ಲ ವೃತ್ತಿ ಹೊಂದಿದವರಲ್ಲಿ ಸಮಾನವಾದ ಗೌರವ ಸಲ್ಲಿಸುವಿಕೆ, ಸಕಲ ಜೀವಾತ್ಮರಿಗೆ ಲೇಸು ಬಯಸುವುದು, ಗುರು–ಲಿಂಗ–ಜಂಗಮಕ್ಕೆ; ತನು–ಮನ–ಧನವನ್ನರ್ಪಿಸುವ ತ್ರಿವಿಧ ದಾಸೋಹ ಸಲ್ಲಿಸುವುದು– ಈ ಮುಂತಾದ ಮಾನವೀಯ ಮೌಲ್ಯಗಳಿಗೆ ನೆಲೆ–ಬೆಲೆಯನ್ನು ತಂದುಕೊಟ್ಟ ಮಹಾನ್ ಚೇತನವಾಗಿದ್ದರು ಅಣ್ಣ ಬಸವಣ್ಣನವರು. ಅಲ್ಲದೆ ತ್ರಿವಿಧ ದಾಸೋಹ ತತ್ತ್ವಗಳಾದ ಭಕ್ತಿ–ಜ್ಞಾನ–ವೈರಾಗ್ಯಗಳಿಗೆ ಹೆಚ್ಚಿನ ಮಹತ್ವತೆಯನ್ನು ತಂದುಕೊಟ್ಟರು. ಮೇಲಾಗಿ ಇವುಗಳನ್ನು ಮನಃಪೂರ್ವಕವಾಗಿ ಶ್ರಮಜೀವಿಯಾಗಿ, ಕಾಯಕದಿಂದಲೇ ಪೂರೈಸಿಕೊಳ್ಳುವುದು. ಅಂದರೆ **'ಕಾಯಕವೇ ಕೈಲಾಸ'** ಎಂಬುದಾಗಿ. ನುಡಿದು–ನಡೆದ ಆಚಾರ್ಯ ಮಹಾಪುರುಷರವರು. ಇವರ ಚರಿತ್ರೆಗಿಂತಲೂ ಚಾರಿತ್ರ್ಯ–ಪ್ರಮುಖವಾಗಿತ್ತೆಂಬುದನ್ನು ಹೇಳಲು ತುಂಬಾ ಅಭಿಮಾನವೆನಿಸುತ್ತದೆ. ಅವರೊಬ್ಬ ಕರ್ನಾಟಕ ಕಂಡ ಅನರ್ಘ್ಯ ರತ್ನವೆಂದು ಹೇಳಬಹುದು. ಬಸವಣ್ಣನವರು ರಚಿಸಿರುವ ಅಸಂಖ್ಯಾತ ವಚನಗಳಲ್ಲಿ ಸಪ್ತಶೀಲ ತತ್ತ್ವಗಳನ್ನು ಬಿತ್ತರಿಸುವಂತಹ ಈ ವಚನ ನಿದರ್ಶನವಾಗಿದೆ.

*ಕಳಬೇಡ, ಕೊಲಬೇಡ, ಹುಸಿಯನುಡಿಯಲುಬೇಡ*
*ಮುನಿಯಬೇಡ, ಅನ್ಯರಿಗೆ ಅಸಹ್ಯಪಡಬೇಡ,*
*ತನ್ನ ಬಣ್ಣಿಸಬೇಡ, ಇದಿರ ಹಳಿಯಲುಬೇಡ*
*ಇದೇ ಅಂತರಂಗಶುದ್ಧಿ; ಇದೇ ಬಹಿರಂಗಶುದ್ಧಿ*
*ಇದೇ ನಮ್ಮ ಕೂಡಲಸಂಗಮದೇವನೊಲಿಸುವ ಪರಿ*

ಇವುಗಳನ್ನು ಪಾಲಿಸಿದಾತನು ಭಗವಂತನನ್ನು ಒಲಿಸಿಕೊಂಡಂತೆಯೇ ಎಂದು ಹೇಳಿದ ಈ ವಚನ ರಚನಾ ಶಿಲ್ಪ ಅದೆಷ್ಟು ಸುಲಭ–ಸರಳ ರೀತಿಯಲ್ಲಿ ಅಣ್ಣನವರು ಪ್ರತಿಪಾದಿಸಿದ್ದಾರೆ! ಇದರಲ್ಲಿ ಅರ್ಥವಾಗದಿರುವ ಪದಗಳು ಯಾವುವೂ ಇಲ್ಲ. ಇದರಲ್ಲಿ ಮಾನವನು ಮಹಾಮಾನವನಾಗುವಲ್ಲಿ ಪಾಲಿಸಬೇಕಾದಂತಹ ಮೌಲ್ಯಗಳಿವೆ. **'ಆದ್ಯರ ವಚನಂಗಳು ಪರುಷ ಕಂಡಯ್ಯಾ'** ಎಂದು ಹೇಳಿದ ಅಣ್ಣನವರು ಲಕ್ಷೋಪಲಕ್ಷ ವಚನಗಳನ್ನು ರಚಿಸಿದ್ದಾರೆಂದು ಹಲವರು ವಿದ್ವಾಂಸರು ಅಭಿಪ್ರಾಯಪಟ್ಟದ್ದುಂಟು. ಶ್ರೀಯುತ ಶಿ.ಶಿ. ಬಸವನಾಳ ಅವರು ಸಂಪಾದಿಸಿದ 'ಬಸವಣ್ಣನವರ ಷಟ್‌ಸ್ಥಲದ ವಚನಗಳು' ಎಂಬ ಗ್ರಂಥದ ತರುವಾಯ ಡಾ॥ ಎಂ.ಎಂ. ಕಲಬುರ್ಗಿಯವರ ಸಂಪಾದಕತ್ವದಲ್ಲಿ ಸಮಗ್ರ ವಚನ ಸಂಪುಟ–೧ ರಲ್ಲಿ ಬಸವಣ್ಣನವರ ವಚನಗಳ ಸಂಖ್ಯೆ ೧೪೧೪ ಎಂದಿದೆ. ಕರ್ನಾಟಕ ಸರ್ಕಾರ ಕನ್ನಡ ಪುಸ್ತಕ ಪ್ರಾಧಿಕಾರದ ವತಿಯಿಂದ ಎರಡು ಸಲ ೧೫ ಸಂಪುಟಗಳು ಮುದ್ರಣಗೊಂಡಿದ್ದು ಸ್ತುತ್ಯಾರ್ಹವಾದುದು. ಬಸವಣ್ಣನವರು ರಚಿಸಿದ ಇನ್ನುಳಿದ ವಚನಗಳು ದೊರಕಿದ್ದರೆ ವಿಶ್ವವೇ ಬೆರಗಾಗುತ್ತಿತ್ತು! ಕಲ್ಯಾಣದ ಕ್ರಾಂತಿಯಲ್ಲಿ ವಚನ ಭಂಡಾರವೇ ಮುಳುಗಿ ಹೋಯಿತು. ಅಳಿದುಳಿದ ವಚನದ ಕವಳಿಗೆಗಳಲ್ಲಿ ಶೋಧಿಸಿ–ಸಂಶೋಧಿಸಿ ಹೆಕ್ಕಿ ತೆಗೆದು ಸಂಪಾದಿಸಿದ ಕೀರ್ತಿ ಡಾ॥ ಫ.ಗು. ಹಳಕಟ್ಟಿಯವರಿಗೆ ಸಲ್ಲುತ್ತದೆ. ಅವರಾದರೂ ಬಸವಣ್ಣನವರು ಹೇಳಿರುವಂತೆ **'ನಾ ಮಾಡಿದೆನೆಂಬುದು ಮನದಲ್ಲಿ ಮೂಡಲಿಲ್ಲ'** ಅವರನ್ನು ನಾಡಿನ ಜನತೆ ಆಧುನಿಕ ಬಸವಣ್ಣನೆಂದೇ ಕರೆದು ಗೌರವಿಸಿತು. ಆದುದರಿಂದ ವಚನದ ಕಟ್ಟುಗಳನ್ನು ಸಂಪಾದಿಸಿ ಕೊಟ್ಟವರನ್ನು ಬಸವಣ್ಣ ನವರ ಜೊತೆಗೆ ಸ್ಮರಿಸುವುದೂ ನಮ್ಮ ಧರ್ಮವೇ ಸರಿ.

ಬಸವಣ್ಣನವರು ನಮ್ಮ ನಿಮ್ಮ ಹಾಗೆಯೇ ಮಾನವರೇ. ಅವರು ಮಹಾಮಾನವರಾದುದು ನಡೆ, ನುಡಿಗಳನ್ನು

* ಪ್ರಾಧ್ಯಾಪಕರು, ಸ್ನಾತಕೋತ್ತರ ಅಧ್ಯಯನ ಕೇಂದ್ರ, ಹಾರೋಗೇರಿ, ರಾಯಭಾಗ ತಾ॥







ಒಂದಾಗಿಸಿಕೊಂಡು ಬಾಳಿನುದ್ದ **'ನುಡಿದಂತೆ ನಡೆ ಅದೇ ಜನ್ಮ ಕಡೆ'** ಎಂಬೋಕ್ತಿಗೆ ಕಟಿಬದ್ಧರಾದವರು. **'ಎನಗಿಂತ ಕಿರಿಯರಿಲ್ಲ ಶಿವಶರಣರಿಗಿಂತ ಹಿರಿಯರಿಲ್ಲ'**, ಬಾಗಿದ ತಲೆ ಮುಗಿದ ಕೈ ಅವರ ಜೀವನ ಶೈಲಿಯಾಗಿತ್ತು'. **'ಸದು ವಿನಯವೇ ಸದಾಶಿವನ ಒಲುಮೆ'**ಯೆಂದೇ ಬಗೆದಂತೆ ಬಾಳಿದ ಮಹಾನು ಭಾವರವರು. ಅವರ ಜೀವನ ಚರಿತ್ರೆಯನ್ನು ನೋಡಿದಾಗ ನಮ್ಮೆಲ್ಲರ ಗಮನಕ್ಕೆ ಬರುವ ಅಂಶಗಳಾವುವೆಂದರೆ; ಅವರು ಸಾಕಷ್ಟು ಕಂಟಕ–ನೋವು– ದುಃಖ–ಹಿಂಸೆಗಳನ್ನು ಎದುರಿ ಸಿರುವರು. ಬುದ್ಧ–ಮಹಾ ವೀರ, ಯೇಸು, ಸಾಕ್ರಟೀಸ್, ಮಹಮ್ಮದ್ ಪೈಗಂಬರರಂತೆ ಕಷ್ಟ ಸಂಕಷ್ಟಗಳನ್ನು ಎದುರಿ ಸಿರುವರು. ನೋವುಂಡ ನಂಜುಂಡರಾದವರು, ಬಸವಣ್ಣನವರು ವೀರ ವಿನಯಗಳ ಕೂಡಲ ಸಂಗಮವೆಂದು ಕರೆಯಿಸಿ ಕೊಂಡವರು. ತಮಗೆ ಪ್ರಿಯವಾದ ತತ್ತ್ವಕ್ಕಾಗಿ, ಸಮಾನತೆಯ, ಸಹೋದರತೆಯ, ಸರ್ವೋದಯ, ಸಕಲ ಸದ್ಗತಿಯ ತತ್ತ್ವಕ್ಕಾಗಿ **'ಮರಣವೇ ಮಹಾನವಮಿ'**ಯೆಂದು ನಿರ್ಭಯವಾಗಿ ಮುನ್ನುಗ್ಗಿದ್ದವರು. ಅವರ ಜೀವನವೊಂದು ಅದ್ಭುತಗಳ ರಂಗಸ್ಥಳ. ಎಂಟನೆಯ ವಯಸ್ಸಿನಲ್ಲಿಯೇ ತಂದೆ–ತಾಯಿ; ಮನೆ–ಮಾರು, ಬಂಧು–ಬಳಗವನ್ನು ತೊರೆದು ಹೋದುದು ಮೊದಲನೆಯ ಅದ್ಭುತ ೨೪ನೆಯ ವಯಸ್ಸಿನಲ್ಲಿ ಪ್ರಧಾನಿ ಪದವಿಯನ್ನಲಂಕರಿಸಿದುದು ೨ನೆಯ ಅದ್ಭುತ. ಅಲ್ಲದೆ ತಮ್ಮ ೩೬ನೆಯ ವಯಸ್ಸಿನಲ್ಲಿ ವಿಶ್ವವಿಭೂತಿ ಪುರುಷರ ಮಾಲಿಕೆಗೆ ಸೇರಿದುದು ಮೂರನೆಯ ಅದ್ಭುತ. ಉಚ್ಚ ವರ್ಣದಲ್ಲಿ ಜನಿಸಿ ಪತಿತೋದ್ಧಾರಕ್ಕಾಗಿ ಪ್ರಾಣ ತೆತ್ತುದು ಇನ್ನೊಂದು ಅದ್ಭುತ!. **'ಮನುಕುಲದ ಇತಿಹಾಸದಲ್ಲಿ ಆಗೊಮ್ಮೆ ಈಗೊಮ್ಮೆ ತಲೆದೋರುವ ಕಾರಣಪುರುಷರಲ್ಲಿ ಅವರೊಬ್ಬರು'** ಎಂದು ಹೇಳಿದ ಡಾ॥ ಸಿದ್ಧಯ್ಯಪುರಾಣಿಕರ ಮಾತು ಗಮನಾರ್ಹವಾದುದು. ಭೀಮಕವಿ, ಹರಿಹರದೇವ–ಮುಂತಾದ ಕವಿಗಳು ರಚಿಸಿರುವ ಬಸವಣ್ಣನವರ ಜೀವನ ಚರಿತ್ರೆಯನ್ನು ಮೂರ್ತಿವತ್ತಾಗಿ ಕಡೆದು ನಿಲ್ಲಿಸಿರುವರು.

ನೀಲಾಂಬಿಕೆಯರ ಕಿವಿಯೋಲೆಯ ಕಳ್ಳರು, ಆಕಳು ಕದಿಯಲು ಬಂದ ಕಳ್ಳರು, ಬಸವಣ್ಣನಿರುವ ಅರಮನೆಗೆ ಬಂದರೆ ಆ ಸುದ್ದಿ ಅಣ್ಣನವರಿಗೆ ಗೊತ್ತಾಗುತ್ತದೆ. ಆಗ ಅವರು ತಮ್ಮ ಸತಿಯರಿಗೆ ಓಲೆಗಳನ್ನು ಕಿತ್ತುಕೊಡಬಾರದೇ ಎಂದರಲ್ಲದೆ ತಮ್ಮ ಕರುಗಳನ್ನು ನೆನೆದು ಆ ಆಕಳುಗಳು ಹುಲ್ಲು ತಿನ್ನದೆ ನಿಂತಿರಬಹುದು. ಕಾರಣ ಆ ಕರುಗಳನ್ನೂ ಕೊಂಡೊಯ್ದು ಆ ಕಳ್ಳರಿಗೆ ಒಪ್ಪಿಸಿ ಬನ್ನಿರಿ ಎಂದು ಕರುಗಳನ್ನು ಕಳಿಸಿಕೊಟ್ಟರು. ಇದರಿಂದ ಆ ಕಳ್ಳರ ಅವಸ್ಥೆ ಏನಾಗಿರಬೇಕು? ಪಶ್ಚಾತ್ತಾಪದ ಅಗ್ನಿಯಲ್ಲಿ ದಗ್ಧರಾಗಿ ಶುದ್ಧರಾದವರು. ಆ ಕಳ್ಳರು ಬಸವಣ್ಣನವರ ಪರಮಭಕ್ತರಾಗಿ ಪರಿವರ್ತನೆಗೊಂಡು ಅನುಯಾಯಿಗಳಾದರು. ಇದು ಬಸವಣ್ಣನವರ ಭಕ್ತಿಯ ಶಕ್ತಿ; ಅವರ ಹೃದಯ ಪರಿವರ್ತನೆಯ ಹಾದಿ. ಈಶ್ವರಚಂದ್ರ ಚಿಂತಾಮಣಿಯವರು ಹೇಳಿರುವಂತೆ–**'ರಾವಣನನ್ನು ಕೊಂದು ವಿಭೀಷಣನಿಗೆ ಪಟ್ಟ ಕಟ್ಟುವುದಕ್ಕಿಂತ ರಾವಣನನ್ನೇ ವಿಭೀಷಣನನ್ನಾಗಿ ಮಾರ್ಪಡಿಸುವ ಧೋರಣೆ ಬಸವಣ್ಣನವರದಾಗಿತ್ತು** ಎಂದಿದ್ದಾರೆ. ಅವರು ನಡೆದುದೇ ಪವಾಡವಾಗುತ್ತಿತ್ತು. ಅವರು ಅನೇಕ ಪವಾಡಗಳನ್ನು ಬೀರಿದವರೆಂದು ಹೇಳ ಲಾಗಿದೆ. ಹರಿಹರಕವಿಯು ೮೮ ಪವಾಡಗಳನ್ನು ಗೈದಾತನೆಂದು ತನ್ನ ಬಸವರಾಜ ದೇವರ ರಗಳೆಯಲ್ಲಿ ಬಣ್ಣಿಸಿರುವನು. ಭೀಮ ಕವಿಯೂ ತನ್ನ **'ಬಸವ ಪುರಾಣ'**ದಲ್ಲೂ ಹೇಳಿರುವನು. 'ಎಂಬತ್ತೆಂಟು ಪವಾಡವ ಮರೆದು ಹಗರಣದ ಜೋಹದಂತಾಯಿತ್ತೆನ್ನ ಭಕ್ತಿ' ಎಂಬುದಾಗಿ ಅಣ್ಣನವರೇ ತಮ್ಮದೊಂದು ವಚನದಲ್ಲಿ ಹೇಳಿಕೊಂಡಿದ್ದಾರೆ. ಆ ಪವಾಡಗಳನ್ನು ನಂಬಬಹುದು, ನಂಬದಿರಬಹುದು. ಆದರೆ ಆ ಹಿಂಸೆಯ ಮಾರ್ಗದಿಂದ, ಹೃದಯ ಪರಿವರ್ತನೆಯ ಹಾದಿಯಿಂದ, ಆತ್ಮೀಯತೆಯ ಅನುಕಂಪ– ಅನುರಾಗದ ದಾರಿಯಿಂದ ದುಷ್ಟರನ್ನು ಶಿಷ್ಟರನ್ನಾಗಿಸಿದ, ದುರ್ಜನರನ್ನು ಸಜ್ಜನರನ್ನಾಗಿಸಿದ, ಪಾತಕಿ ಗಳನ್ನು ನೀತಿವಂತರನ್ನಾಗಿ ಪರಿವರ್ತಿಸಿದ ಪವಾಡಗಳನ್ನು ನಂಬದಿರುವುದು ಸಾಧ್ಯವೇ ? ಇದೆಲ್ಲವನ್ನು ಗಮನಿಸಿದಾಗ ಬಸವಣ್ಣನವರ ಜೀವನ ಚರಿತ್ರೆ ಸ್ಫಟಿಕದಷ್ಟು ಶುಭ್ರವಾಗಿತ್ತು ಎಂಬುದನ್ನು ಗಮನಿಸಬಹುದು.

ಬಸವಣ್ಣನವರು ಎಂದೂ ಸನ್ಯಾಸದ ಕನಸು ಕಂಡವರಲ್ಲ. ದಾಂಪತ್ಯ ಜೀವನದಿಂದಲೇ ಮುಕ್ತಿ ಪಡೆದ ಮಹಿಮ. ಅವನು ನೂರಕ್ಕೆ, ನೂರರಷ್ಟು ವಾಸ್ತವವಾದಿ. ಇಂದ್ರಿಯ ನಿಗ್ರಹದಿಂದ ಮುಂದೆ ದೋಷಗಳು ಹೊದ್ದುವವೆಂದು ಭಾವಿಸಿದರು. ಸತಿ–ಪತಿಗಳೊಂದಾದ ಭಕ್ತಿ ಹಿತ

ವಾಗಿಪ್ಪುದು ಶಿವಂಗೆ ಎಂದು ಅರಿತಿದ್ದನು. ಅದಕ್ಕಾಗಿ ಮದುವೆಗೆ ತಾನು ಸಮ್ಮತಿಯಿತ್ತು ಗಂಗಾಂಬಿಕೆ–ನೀಲಾಂಬಿಕೆಯರನ್ನು ವಿವಾಹವಾಗಿದ್ದರು. (ಗಂಗಾಂಬಿಕೆ ಬಲದೇವನ ಮಗಳು; ನೀಲಾಂಬಿಕೆ ಸಿದ್ಧರಸನ ಮಗಳು, ಬಲದೇವ ಮತ್ತು ಸಿದ್ಧರಸರು ಸೋದರರಾಗಿದ್ದರು).

ಅವರ ದಾಂಪತ್ಯ ಜೀವನ ಅತ್ಯಂತ ಸುಖಮಯವಾಗಿತ್ತು. ಬಸವಣ್ಣನವರನ್ನು ಅರ್ಥಮಾಡಿಕೊಂಡು; ಅವರಿಗೆ ಹೊಂದಿಕೊಂಡು, ಅವರ ಬಹುಮುಖವಾದ ಸಾಮಾಜಿಕ, ಧಾರ್ಮಿಕ–ಸಾಂಸ್ಕೃತಿಕ ಜೀವನದಲ್ಲಿ ಇಬ್ಬರು ಪತ್ನಿಯರು ಭಾಗವಹಿಸುತ್ತಿದ್ದರು. ಅವರ ಮನೆಗೆ ಬರುವ ಭಕ್ತರು ಸಂಖ್ಯೆಗೆ ಮಿತಿಯಿರಲಿಲ್ಲ. ಅವರ ಆದರಾತಿಥ್ಯವನ್ನು ಜವಾಬ್ದಾರಿಯಿಂದ ನಿಭಾಯಿಸುವವರಾಗಿದ್ದರು. (ಗಂಗಾಂಬಿಕೆಗೆ ಒಬ್ಬ ಮಗನಾದ ಬಾಲಸಂಗಯ್ಯನು ಪ್ರಾಪ್ತವಯಸ್ಸಿಗೆ ಬರುತ್ತಿರುವಂತೆಯೇ ಮಡಿದು ಹೋದನಂತೆ) ಬಡ ಭಕ್ತರಿಗಾಗಿ ಮನೆಯ ಬಾಗಿಲು ಸದಾ ಕಾಲವೂ ತೆರೆದಿಟ್ಟರು. ಅವರ ಭಕ್ತಿ, ವಿನಯ, ಔದಾರ್ಯಗಳನ್ನು ಕೇಳಿ ದೇಶದ ನಾನಾ ಭಾಗಗಳಿಂದ, ತುತ್ತ ತುದಿಯ ದೂರದ ಕಾಶ್ಮೀರದಿಂದಲೂ ಭಕ್ತರು ಗುಂಪು ಗುಂಪಾಗಿ ಬಂದರು. '**ಶರಣ ಸತಿ ಲಿಂಗ ಪತಿ**' ಎಂದು ನಂಬದವ. ಶಿವಭಕ್ತರನ್ನು ಶಿವನೆಂದೇ ತಮ್ಮ ಪತಿಯೆಂದೇ ಬಗೆದವರು. ಅವರ ಮನೆಯಲ್ಲಿ ನಿತ್ಯವೂ ಶಿವರಾತ್ರಿಯೇ. ಅವರ ವಿನೀತ ಭಾವದ ಸಂಕೇತವಾಗಿ–

***ಹಾವಿನ ಡೊಂಕು ಹುತ್ತಕ್ಕೆ ಸಸಿನ***
***ನದಿಯ ಡೊಂಕು ಸಮುದ್ರಕ್ಕೆ ಸಸಿನ***

ನಮ್ಮ ಕೂಡಲಸಂಗನ ಶರಣರ ಡೊಂಕು ಲಿಂಗಕ್ಕೆ ಸಸಿನ ಎಂದು ಭಾವಿಸಿದ ಬಸವಣ್ಣನವರು ನಾನು ನಿಮ್ಮ ಕಿಂಕರರ ಕಿಂಕರ, ಎನಗಿಂತ ಕಿರಿಯರೇ ಇಲ್ಲ ಎಂದವರು. ದಯವೇ ಧರ್ಮದ ಮೂಲ. ದಯವಿಲ್ಲದ ಧರ್ಮ ಅದಾವುದಯ್ಯಾ! ದಯವಿರಬೇಕು ಸಕಲ ಪ್ರಾಣಿಗಳೆಲ್ಲರಲ್ಲಿ ಎಂದು ನುಡಿದು ನಡೆದ ಮಹಾನುಭಾವರು. ಅಲ್ಲದೆ ಸಜ್ಜನರಾದ ಶರಣರ ಸಂಗದೊಡನಾಟವೇ ನನಗೆ ಹೆಜ್ಜೇನು ಸವಿದಂತೆ ಎಂದವರು. ಆದುದರಿಂದ ತಮ್ಮದೊಂದು ವಚನದಲ್ಲಿ ಹೀಗೆಂದಿದ್ದಾರೆ. ಶರಣರೆಂದರೆ ಅಷ್ಟು ಪ್ರೀತಿ ಮಮತೆ.

***'ಮಡಕೆಯ ಮಾಡುವರೆ ಮಣ್ಣೆ ಮೊದಲು***
***ತೊಡಗೆಯ ಮಾಡುವರೆ ಹೊನ್ನೆ ಮೊದಲು***
***ಶಿವಪಥವನರಿವೊಡೆ ಗುರುಪಥವೇ ಮೊದಲು***
***ಕೂಡಲಸಂಗಮದೇವರನರಿವೊಡೆ ಶರಣರ***
***ಸಂಗವೇ ಮೊದಲೇ ಮೊದಲು'***

ಎಂದು ಬಣ್ಣಿಸಿದ ಬಸವಣ್ಣ ಶರಣರ ಸಹವಾಸವನ್ನು ಮಾಡಿ, ಶರಣರಲ್ಲಿ ಬೆರೆತು ಒಂದಾದರು. **'ಏನೀ ಬಂದಿರಾ, ಹದುಳವಿದ್ದೀರಾ! ಎಂದರೆ ನಿಮ್ಮ ಮೈಸಿರಿ ಹಾರಿ ಹೋದುದೆ'**– ಮನೆಗೆ ಬಂದವರನ್ನು ಏತಕ್ಕೆ ಬಂದಿರಿ, ಚೆನ್ನಾಗಿದ್ದೀರಾ! ಎಂದು ಕೇಳಿದರೆ ನಿಮ್ಮ ಮೈಸಿರಿ ಹಾರಿ ಹೋಗುವುದಿಲ್ಲ. ಅವರಿಗೇನೂ ಕೊಡದಿದ್ದರೂ ಚಿಂತೆಯಿಲ್ಲ ಎರಡು ಒಳ್ಳೆಯ ಮಾತುಗಳನ್ನಾದರೂ ಆಡುವುದು ಬೇಡವೇ! ಎನ್ನುತ್ತಾರೆ ಬಸವಣ್ಣನವರು. ಆಡುವ ಮಾತುಗಳು ಯಾವಾಗಲೂ ನಯವಾಗಿಯೂ ಅನ್ಯರಿಗೆ ನೋವನ್ನುಂಟುಮಾಡದಂತೆಯೂ ಇರಬೇಕೆಂದೂ ಹೇಳಿದ ವಚನವಿಲ್ಲಿದೆ

***ನುಡಿದರೆ ಮುತ್ತಿನ ಹಾರದಂತಿರಬೇಕು***
***ನುಡಿದರೆ ಮಾಣಿಕ್ಯದ ದೀಪ್ತಿಯಂತಿರಬೇಕು***
***ನುಡಿದರೆ ಸ್ಫಟಿಕದ ಸಲಾಕೆಯಂತಿರಬೇಕು***
***ನುಡಿದರೆ ಲಿಂಗಮೆಚ್ಚಿ ಅಹುದಹುದೆನಬೇಕು***
***ನುಡಿಯೊಳಗಾಗಿ ನಡೆಯದಿದ್ದೊಡೆ ಕೂಡಲಸಂಗಮ***
***ದೇವನೊಂತೊಲಿವನಯ್ಯಾ?***

ಎಂದು ಪ್ರಶ್ನಿಸಿದ್ದಾರೆ. ಬಸವಣ್ಣನವರ ಬದುಕು ವಿನಯದ ಆಗರ–ವಿಶಾಲ ಭಾವದ ಸಾಗರ. ಅವರಿಗೆ ಶರಣು ಎಂದರೆ ಶರಣಾರ್ಥಿ ಎನ್ನುವವರು. ಒಂದು ರಾಜ್ಯದ ಒಳಿತಿಗಾಗಿ ಪ್ರಧಾನಿಯಾಗಿ ಕಾರ್ಯ ನಿರ್ವಹಿಸಿದ ಬಸವಣ್ಣನವರಲ್ಲಿ ಕಿಂಚಿತ್ತೂ ದರ್ಪದ ಭಾವವಿದ್ದಿರಲಿಲ್ಲ. **'ಸತ್ಯವ ನುಡಿಯುವುದೇ ದೇವಲೋಕ, ಮಿಥ್ಯವ ನುಡಿವುದೇ ಮರ್ತ್ಯ ಲೋಕ, ಆಚಾರವೇ ಸ್ವರ್ಗ–ಅನಾಚಾರವೇ ನರಕ'** ಎಂದು ಸಾರಿದರು. ಅಂತರಂಗ–ಬಹಿರಂಗ ಶುದ್ಧಿಯಿಂದ ಸಪ್ತ ವಾಚಕಗಳನ್ನು ಮಾಡದಿದ್ದರೆ ಸಮಾನತೆಯನ್ನು ಸಾಧಿಸಬಹುದೆಂಬುದು ಅವರ ಬಲವಾದ ನಂಬುಗೆ. ಸಾಧಕ ಅರಿವಿನೊಡನೆ ಆಚರಣೆಯನ್ನು ಅಳವಡಿಸಿಕೊಂಡು ಆತ್ಮ ವಿಮರ್ಶೆ ಮಾಡಿಕೊಳ್ಳುತ್ತ ಬದುಕಬೇಕು. ಮತ್ತೊಬ್ಬರ ದೋಷವನ್ನು ಎಣಿಸದೇ ತನ್ನನ್ನು ತಾನು ಅರಿಯಬೇಕು. ಇದುವೇ ಅಂತರಂಗ ಶುದ್ಧಿಯ





ಮಾರ್ಗ. ಇದುವೇ ಸಮಾನತೆಯ ದಾರಿ ಎಂದಿದ್ದಾರೆಂಬುದಕ್ಕೆ ಈ ಕೆಳಗಿನ ವಚನವೇ ಸಾಕ್ಷಿ– ಅದು ಹೀಗಿದೆ :

***'ಲೋಕದ ಡೊಂಕು ನೀವೇಕೆ ತಿದ್ದುವಿರಿ***
***ನಿಮ್ಮ ತನುವ ಸಂತೈಸಿಕೊಳ್ಳಿ***
***ನಿಮ್ಮ ಮನವ ಸಂತೈಸಿಕೊಳ್ಳಿ***
***ನೆರೆಮನೆಯವರ ದುಃಖಕ್ಕೆ ಅಳುವವರ***
***ಮೆಚ್ಚಲಾರ ನಮ್ಮ ಕೂಡಲಸಂಗಮದೇವನು'***

ಅಂದರೆ ನಮ್ಮಲ್ಲಿಯೂ ಅಸ್ಥಿರತೆ ನಿವಾರಿಸಿಕೊಳ್ಳದೇ ಅನ್ಯರ ಡೊಂಕನ್ನು ತಿದ್ದಲು ಪ್ರಯತ್ನಿಸುವುದೂ ಸಹ ಅಸಮಾನತೆ. ನಮ್ಮ ಇಹದ ಬದುಕನ್ನು ಸತತ ಜಾಗೃತ ಅವಸ್ಥೆಯಲ್ಲಿಟ್ಟುಕೊಂಡರೆ ಸಮಾನತೆ ಸಾಧಿಸಿದಂತಾಗುತ್ತದೆ ಎಂದಿರುವರು ಬಸವಣ್ಣನವರು.

ಮಾಂಡಲೀಕನಾದ ಕಲಚುರಿಯ ಬಿಜ್ಜಳನಲ್ಲಿ ಕರಣಿಕ–ಗಣಕಾಧಿಕಾರಿಯಾಗಿ ಕಲ್ಯಾಣದಲ್ಲಿ, ಭಂಡಾರ ಮಂತ್ರಿಯಾದನು. ಆನಂತರದ ದಿನಗಳಲ್ಲಿ ಈ ಪಟ್ಟಣವೇ ಬಸವಣ್ಣನವರ ಬದುಕಿನ ಬಹುಮುಖ್ಯ ಕೇಂದ್ರವಾಯಿತು. ಈ ಸಂದರ್ಭದಲ್ಲಿಯೇ ಶರಣ ಸಮುದಾಯದ ಸಂಘಟನೆ, ಅನುಭವ ಮಂಟಪದ ಸ್ಥಾಪನೆ, ಸಿದ್ಧಾಂತಗಳ ರಚನೆ ಮತ್ತು ಪ್ರಸಾರ ಕಾರ್ಯ, ವಚನ ಸಾಹಿತ್ಯದ ಸೃಷ್ಟಿ, ಮುಂತಾದ ಬಹುದೊಡ್ಡ ಕಾಣಿಕೆಗಳು ಇವರಿಂದ ಸಂದವು. ಕೂಡಲಸಂಗಮದಲ್ಲಿ ಆತ್ಮಕಲ್ಯಾಣ ಮಾಡಿಕೊಂಡಿದ್ದ ಬಸವಣ್ಣ; ಕಲ್ಯಾಣದಲ್ಲಿ ಸಮಾಜ ಕಲ್ಯಾಣಕಾರ್ಯದಲ್ಲಿ ತನ್ನನ್ನು ತಾ ತೊಡಗಿಸಿಕೊಂಡರು. ಆಗ ಅವರು ಲಿಂಗದಿಂದ ಜಂಗಮಕ್ಕೆ ವಿಸ್ತರಿಸಿಕೊಂಡಂತಹ ಕಾಲಘಟ್ಟವೆನ್ನಬೇಕು. ಕಲ್ಯಾಣದಲ್ಲಿ ಕ್ರಾಂತಿಯ ನೇತೃತ್ವ ವಹಿಸಿ ಅನೇಕ ಪ್ರಸಂಗಗಳನ್ನು ಎದುರಿಸ ಬೇಕಾಯಿತು. ಒಟ್ಟಿನಲ್ಲಿ ಬಸವಣ್ಣನವರ ಜೀವನವೇ ಸಾಹಸ ಯಾತ್ರೆಯಾಗಿತ್ತು.

ಹೀಗೆ ಬಸವಣ್ಣನವರು ಬಾಗೇವಾಡಿಯಲ್ಲಿ ಕರ್ಮದಿಂದ ಧರ್ಮಕ್ಕೆ; ಕೂಡಲಸಂಗಮದಲ್ಲಿ ಅಂಗದಿಂದ ಲಿಂಗಕ್ಕೆ, ಕಲ್ಯಾಣದಲ್ಲಿ ಲಿಂಗದಿಂದ ಜಂಗಮಕ್ಕೆ ಸಾಗಿ ಬಂದಿದ್ದಾರೆನ್ನಬಹುದು. ಜಂಗಮ ಸೇವೆಯೇ ಜನಾರ್ಧನ (ಸಮಾಜ)ದ ಸೇವೆಯೆಂದು ಬಗೆದವರು. ಜಂಗಮ ಸೇವೆಯೇ ಅಂಗವಾಗಿ ವರ್ಗಭೇದ, ಲಿಂಗಭೇದಗಳ ನಿರಾಕರಣೆಯ ತೀವ್ರವಾದ ಕ್ರಮಗಳನ್ನು ಅವರು ಕೈಗೊಂಡರು. ಕೆಳವರ್ಗದವರು ಮೇಲುವರ್ಗದವರಾಗುವ ಪ್ರಗತಿಪರ ನಿಲುವು ಬಸವಣ್ಣನವರದಾಗಿತ್ತು. ಇದಕ್ಕಾಗಿ ಹೋರಾಕ್ಕಿಳಿಯಬೇಕಾಯಿತು. ಅದಕ್ಕಾಗಿಯೇ ಶರಣ ಪಡೆಯನ್ನು ಸಂಯೋಜಿಸಿ ಸಂಘಟಿಸಿದನು. ಆದರೆ ಈ ಪ್ರಗತಿಪರ ನಿಲುವನ್ನು ಪ್ರತಿಭಟಿಸುವ ರೀತಿಯಲ್ಲಿ ಅಗ್ರಹಾರ ಸಂಸ್ಕೃತಿ, ದೇವಾಲಯ ಸಂಸ್ಕೃತಿ ಮತ್ತು ರಾಜಸತ್ತಾ ಸಂಸ್ಕೃತಿಗಳು ಒಟ್ಟಾಗಿ ನಿಂತು, ಅವನ ಈ ಆಂದೋಲನವನ್ನು ಹತ್ತಿಕ್ಕಿದವು. ಸತ್ಯವನ್ನು ಎತ್ತಿ ಹಿಡಿದ ಶರಣರು ದಮನಕ್ಕೆ ಗುರಿಯಾದರು, ಹುತಾತ್ಮರಾದರು. ಬಸವಣ್ಣನವರು ಕಲ್ಯಾಣವನ್ನು ತೊರೆದು ಕೂಡಲಸಂಗಮಕ್ಕೆ ಬಂದು ಐಕ್ಯರಾದನೆಂದು ಚರಿತ್ರೆಯು ಬಣ್ಣಿಸುತ್ತದೆ. ಇಂಥ **'ಸಮಾಜ ಸುಧಾರಕ'** ಬಸವಣ್ಣನವರು ಇನ್ನಷ್ಟು ಕಾಲ ಬದುಕಬೇಕಾಗಿತ್ತು. ಬಹುಕಾಲ ವಿದ್ದಿದ್ದರೆ ನಾಡಿನ, ದೇಶದ ಸುಧಾರಣೆಗೆ ಹಾದಿ ಇನ್ನಷ್ಟು ಸುಗಮವಾಗುತ್ತಿತ್ತೆಂಬುದು ನನ್ನ ಅನಿಸಿಕೆ. ಇಂಥ ಹೋರಾಟದ ಮಹಾನುಭಾವರು, ಅನೇಕ ಮಹಾತ್ಮರು, ಹೀಗೆಯೇ ಹೋರಾಡಿ–ಹೋರಾಡಿ ಅಮರರಾಗಿಹರು. ತಮ್ಮ ವ್ಯಕ್ತಿಗತ ಬದುಕಿಗೆ ಎಂದೂ ಬೆಲೆ ಕೊಟ್ಟವರಲ್ಲ. ಸಮಾಜವೇ ನನ್ನ ಉಸಿರೆಂದು; ದೇಶಸೇವೆಯೇ ಈಶ ಸೇವೆಯೆಂದು ಬಗೆದವರು.

ಬಸವಣ್ಣನವರು ಅನುಭವ ಮಂಟಪದ ಸ್ಥಾಪನೆ ಮಾಡಿದ ಆನಂತರ ಧಾರ್ಮಿಕ–ಸಾಮಾಜಿಕ–ಸಾಂಸ್ಕೃತಿಕ–ಆರ್ಥಿಕ ಮುಂತಾದ ಸಮಸ್ಯೆಗಳ ಬಗೆಗೆ ಚರ್ಚೆಯಾಗುತ್ತಿದ್ದವು. ಅವನ್ನೇ ವಚನಗಳಲ್ಲಿ ಎರಕ ಹೊಯ್ದರು. ಮಾನವನ ಘನತೆ–ಗೌರವಗಳನ್ನು ಎತ್ತಿ ಹಿಡಿಯುವ ಎಲ್ಲ ಸೂತ್ರಗಳು–ತತ್ತ್ವಗಳು ಇವರು ರಚಿಸಿದ ವಚನ ಸಾಹಿತ್ಯದಲ್ಲಿವೆ. ಮಾನವ ಬದುಕನ್ನು ಪ್ರೀತಿಸುವ ಪ್ರತಿಯೊಬ್ಬರ ಅಭಿಲಾಷೆಗಳನ್ನು ಪೂರೈಸುವ ರಸಗಂಧಗಳು ವಚನಗಳಲ್ಲಿ ರಸವತ್ತಾಗಿ ಮೂಡಿ ಬಂದಿದೆ. ವಚನಗಳು ಸಹಜವಾಗಿ ಬಾಳುವ ದಾರಿಯನ್ನು ತೋರಿಸುತ್ತವೆ. ವಿಶಾಲ ಮನೋಭಾವ ಬೆಳೆದು ಬರಲು ಸಹಾಯಕಾರಿಯಾಗಿವೆ. ಸಹ ಜೀವನದ ಮಹತ್ವ ಸಾರುವ ವಚನಗಳು ಸಾಂಘಿಕ ಜೀವನದ ತಿರುಳುಗಳಾಗಿವೆ. ಸುಮಧುರ ಬದುಕಿನ ನೆಲೆಗಳಾಗಿವೆ. ಬಸವಾದಿ ಶಿವಶರಣರ ವಚನಗಳಲ್ಲಿ ಬದುಕನ್ನು ಅತ್ಯಂತ ಕ್ರಿಯಾಶೀಲವಾಗಿ ನಿರ್ವಹಿಸುವ ತತ್ತ್ವಗಳಿವೆ. ಸರ್ವೋದಯ ತತ್ತ್ವಗಳ ತಳಹದಿಯ ವಚನ ಸಾಹಿತ್ಯದಲ್ಲಿದೆ. ನಮ್ಮ ಸಂವಿಧಾನವು

ಸಾಧಿಸಲು ಹೊರಟಿರುವ ಕಲ್ಯಾಣ ರಾಜ್ಯದ ಎಲ್ಲ ತತ್ತ್ವಗಳು ಶರಣ ಸಂಸ್ಕೃತಿಯೊಳಗೆ ಮೇಳೈಸಿಕೊಂಡಿವೆ. ವಚನಗಳು ಸುಲಲಿತ ಸರಳ ಭಾಷೆಯಲ್ಲಿದ್ದುದರಿಂದ ಶ್ರೀ ಸಾಮಾನ್ಯನ ಹತ್ತಿರಕ್ಕೆ ಬಂದಿತು. ತರ-ತಮ ಭಾವವಳಿಯಿತು; ಎಲ್ಲರೂ ನಮ್ಮವರೆಂದೆನಿಸಿತು. ಜನಸಾಮಾನ್ಯರ ಬದುಕಿಗೆ ಬೆಳಕು ನೀಡಬಲ್ಲ ಮತ್ತು ಬದುಕನ್ನು ಚಲನಶೀಲಗೊಳಿಸುವ ವಚನ ಸಾಹಿತ್ಯ ಮಾನವ ಬದುಕಿನ ಜೀವಾಳವಾಗಿದೆ. ಇವತ್ತಿನ ವ್ಯಕ್ತಿ ಮತ್ತು ಸಮಾಜ, ಭಯೋತ್ಪಾದನೆಯಂತಹ ತೊಡಕು ತೊಂದರೆಗಳಿಗೆ ಪರಿಹಾರವೂ ಈ ಸಾಹಿತ್ಯದಲ್ಲಿದೆ. ಈ ಮೊದಲು ಚರ್ಚಿಸಿದಂತೆ ಸ್ವಾವಲಂಬಿ, ಸದುವಿನಯ, ಸದಾಚಾರ ಎಲ್ಲವನ್ನೂ ಅರಿತುಕೊಳ್ಳುವ ಬಸವಾದಿ ಪ್ರಮಥರ ಜೀವನ ಚರಿತ್ರೆಗಳು ನಮಗೆ ದಾರಿದೀಪವಾಗಿವೆ. ಶ್ರಮ ಸಂಸ್ಕೃತಿಯೇ ಶರಣರ ಜೀವನ ಸಂದೇಶವಾಗಿದೆ. **'ಅರಿವೇ ಗುರು'** ವೆಂದು ಸಾರಿದ ಏಕೈಕ ಸಾಹಿತ್ಯ ವಚನ ಸಾಹಿತ್ಯವಾಗಿದೆ. ಇದು ವಿಶ್ವಸಾಹಿತ್ಯಕ್ಕೆ ಕೊಟ್ಟ ಅಮೂಲ್ಯ ಕೊಡುಗೆಯೂ ಆಗಿದೆ. ಬದುಕು-ಬರಹದ ಮೂಲಕ ಸಮಾಜದಲ್ಲಿ ಹೊಸ ಗಾಳಿ ತಂದ ಶ್ರೇಯಸ್ಸು ಸಹ ವಚನ ಸಾಹಿತ್ಯದ ಪಾಲಾಗಿದೆಯೆಂದರೂ ತಪ್ಪಲ್ಲ. ಅನುಭವ ಮತ್ತು ಆಚರಣೆಗಳನ್ನು ಒಂದುಗೂಡಿಸಿದ ವಿಶ್ವದ ಸಾಹಿತ್ಯ ಈ ವಚನ ಸಾಹಿತ್ಯ

ಹೀಗೆ ಬಸವಣ್ಣನವರು ಪರಿಶ್ರಮಪಟ್ಟು ಕಟ್ಟಿದ ಮಹಾಮನೆಯು ಮಾನವ ಕುಲಕೋಟಿಗೆ ಇಂದು-ಮುಂದೆಯೂ ಅಚ್ಚಳಿಯದೇ ಉಳಿಯುವಂತಾಯಿತು. ಶಿವಶರಣರ ಚರಿತ್ರೆ ಮತ್ತು ಅವರು ರಚಿಸಿದ ವಚನ ಸಾಹಿತ್ಯವೇ ನಮಗಿಂದು ಬಾಳಬುತ್ತಿಯಾಗಿದ್ದು ಅದನ್ನು ಅನುಭವಿಸಿ ನಡೆದು ತೋರಿಸಿದರೆ ಬದುಕು ಸಾರ್ಥಕವಾಗುತ್ತದೆ ಎನ್ನುವುದರಲ್ಲಿ ಸಂಶಯವಿಲ್ಲ.

ಬಸವಾದಿ ಪ್ರಮಥರ ವಚನ ಸಾಹಿತ್ಯ ಮಾನವೀಯ ಮೌಲ್ಯಗಳಿಗೆ ಆದ್ಯತೆ ಕೊಟ್ಟಿತು. ಪ್ರಸಾರ ಮಾಡಿತು. ಅಂತೆಯೇ ತೀವ್ರ ಪ್ರಸಾರವಾಯಿತು. ವಚನಕಾರರು ಕಂಡದ್ದು ಸಮಾಜದಲ್ಲಿ ಆಚರಣೆಯಲ್ಲಿರುವ ಮೂಢ ನಂಬಿಕೆ, ಕಂದಾಚಾರ, ಜಾತೀಯತೆ, ಶೋಷಣೆ, ಅನಿಷ್ಟ ಸಂಪ್ರದಾಯಗಳಾಚರಣೆ, ಯಜ್ಞ(ಹೋಮ) ಯಾಗಾದಿ ಗಳಿಗೆ ತುಪ್ಪ-ಅನ್ನ ಪ್ರಾಣಿಗಳನ್ನು ಬಲಿಕೊಡುವ ಪದ್ಧತಿಯಾಗಲಿ-ಮುಂತಾದವುಗಳಿಂದ ಜನರನ್ನು ಹೊರತರಲು ಅವಿರತ ಪ್ರಯತ್ನ ನಡೆಸಿದರು. ಜೊತೆಗೆ ವೈಚಾರಿಕ ಪ್ರಜ್ಞೆಯ ಮೂಲಕ ಜನರನ್ನು ಜಾಗೃತಗೊಳಿಸಿದರು. ಮೂಲದಲ್ಲಿ 'ಸರ್ವೇ ಜನಾಃ ಸುಖಿನೋ ಭವಂತು' ಎನ್ನುವುದು ಕೇವಲ ಮಂತ್ರದಲ್ಲಿ ಮಾತ್ರವಿತ್ತು. ಅದನ್ನು ಆಚರಣೆಗೆ, ಕಾರ್ಯ ರೂಪಕ್ಕೆ ತಂದವರು ವಚನಕಾರರೆಂದರೆ ಅತಿಶಯೋಕ್ತಿಯಾಗಲಾರದು. ದೇವರು, ಧರ್ಮಗಳು ಕೆಲವು ಪುರೋಹಿತ ಶಾಹಿಗಳ ಸ್ವತ್ತಾಗಿದ್ದ ಸಂದರ್ಭದಲ್ಲಿ ಬಸವಣ್ಣನವರು ದೇವಾಲಯವನ್ನೇ ನಿರಾಕರಿಸಿದರು. ದೇಹವನ್ನೇ ದೇಗುಲ ವಾಗಿಸಿ ಜನಸಮುದಾಯವನ್ನು ಮೂಢನಂಬಿಕೆಗಳಿಂದ ಪಾರು ಮಾಡಿ ಹೊಸ ಭಾಷ್ಯ ಬರೆಯಲು ಮುಂದಾದರು.

**ಉಳ್ಳವರು ಶಿವಾಲಯದ ಮಾಡುವರು**
**ನಾನೇನು ಮಾಡಲಿ ಬಡವನಯ್ಯ**
**ಕಾಲ್ಗಳೇ ಕಂಬ, ದೇಹವೇ ದೇಗುಲ**
**ಶಿರವೇ ಹೊನ್ನ ಕಳಸವಯ್ಯಾ**
**ಕೂಡಲ ಸಂಗಮದೇವ ಕೇಳಯ್ಯ**
**ಸ್ಥಾವರಕ್ಕಳಿವುಂಟು ಜಂಗಮಕ್ಕಳಿವಿಲ್ಲ.**

ಈ ವಚನದ ಮೂಲಕ ಚಲನಶೀಲತೆಯಿದ್ದದ್ದು; ಅದು ಯಾವತ್ತಿಗೂ ಪ್ರಸ್ತುತ ಮತ್ತು ಜೀವಂತವಾಗಿರುತ್ತದೆ. ಈ ಮೇಲೆ ಹೇಳಿದಂತೆ ಧರ್ಮದ, ದೇವರ ಹೆಸರಿನಲ್ಲಿ ದಿನನಿತ್ಯ ಪ್ರಾಣಿಗಳನ್ನು ಬಲಿ ಕೊಡುತ್ತ ಹಿಂಸೆಯಲ್ಲಿ ಮೈಮರೆತಿರುವುದನ್ನು ಕಂಡು ಬಸವಣ್ಣನವರು ರೋಸಿ ಹೋಗಿದ್ದಾರೆ.

**ದಯವಿಲ್ಲದ ಧರ್ಮವುದಾವುದಯ್ಯ**
**ದಯವಿರಬೇಕು ಸಕಲ ಪ್ರಾಣಿಗಳೆಲ್ಲರಲ್ಲಿ**
**ದಯವೇ ಧರ್ಮದ ಮೂಲವಯ್ಯಾ**
**ಕೂಡಲಸಂಗಯ್ಯನಂತಲ್ಲದೊಲ್ಲನಯ್ಯಾ**

ಎಂದು ಈ ವಚನದ ಮೂಲಕ ಅಹಿಂಸೆ, ದಯೆ, ಪ್ರೀತಿಯನ್ನು ತೋರಿಸಿ ಮಾನವೀಯತೆಯನ್ನು ಮೆರೆಯಲು ತಿಳಿಯಪಡಿಸಿದ್ದಾರೆ. ಇಂಥ ಉದಾತ್ತ ಉನ್ನತ ವಿಚಾರಗಳನ್ನೊಳಗೊಂಡ ಸಹಸ್ರ-ಸಹಸ್ರ ವಚನಗಳಿವೆ. ಒಟ್ಟಿನಲ್ಲಿ ಪುರಾಣ, ವೇದ ಶಾಸ್ತ್ರಗಳು ಮನುಷ್ಯ ಮನುಷ್ಯರಲ್ಲಿ ಬಿರುಕುಗಳನ್ನುಂಟು ಮಾಡಿ ಮೂಢನಂಬಿಕೆಗೊಳಪಡಿಸಿದ್ದನ್ನು ಪ್ರತಿಯೊಬ್ಬ ವಚನಕಾರರು ಪ್ರತಿಭಟಿಸಿದ್ದಾರೆ.





# ಗಣರಾಜ್ಯೋತ್ಸವ ರಾಷ್ಟ್ರಪ್ರೇಮದ ಸಂಕೇತವಾಗಲಿ

-ಯೋಗೀಶ್ ನಿರ್ವಿಕಲ್ಪ *

ಜನವರಿ ೨೬, ೧೯೫೦ ಗಣರಾಜ್ಯೋತ್ಸವ ದಿನ. 'We are the people of India' ಅಂದರೆ ನಾವೆಲ್ಲರೂ ಭಾರತೀಯ ರೆಂದು ಅರ್ಥೈಸಿಕೊಂಡು ನಮ್ಮ ರಾಷ್ಟ್ರಾಡಳಿತ ವ್ಯವಸ್ಥೆಗೆ ನಾವು ರೂಪಿಸಿಕೊಂಡ 'ಸಂವಿಧಾನ' ಅಧಿಕೃತವಾಗಿ ಜಾರಿಗೆ ಬಂದ ಮಹತ್ವಪೂರ್ಣದಿನವಾಗಿದೆ. ನ್ಯಾಯಾಂಗದ ಪರಮಾಧಿಕಾರ, ವ್ಯಕ್ತಿ ಸ್ವಾತಂತ್ರ್ಯ, ಸಮಾಜವಾದ, ಜಾತ್ಯಾತೀತ ಧೋರಣೆ, ಕಲ್ಯಾಣ ರಾಜ್ಯದ ಸಂಕಲ್ಪ, ದೇಶ ಕಾನೂನಿನ ಆಳ್ವಿಕೆಯ ಮೂಲತತ್ತ್ವಗಳು ನಮ್ಮ ಸಂವಿಧಾನ ದಲ್ಲಿ ಅಡಕವಾಗಿರುವ ಅತ್ಯಮೂಲ್ಯ ಸಂಗತಿಗಳು.

ಆಗಸ್ಟ್ ೫, ೧೯೪೭ರಂದು ಭಾರತ ಸ್ವತಂತ್ರಗೊಂಡ ನಂತರ ದೇಶ ಸಾರ್ವಭೌಮತ್ಯಕ್ಕೆ ಧಕ್ಕೆಯಾಗದಂತಹ ಸ್ಪಷ್ಟ ವಾದ ಒಂದು ಸಂವಿಧಾನದ ಅವಶ್ಯಕತೆ ಕಂಡುಬಂದಿತು. ಆ ಸಂದರ್ಭದಲ್ಲಿ ಸಂವಿಧಾನ ರಚನಾ ಸಭೆ (Constitutional Assembly) ಮತ್ತು ಸಂವಿಧಾನ ಕರಡು ಸಮಿತಿ (Draft Committee) ಗಳು ಅಸ್ತಿತ್ವಕ್ಕೆ ಬಂದವು. ಈ ಸಮಿತಿಗಳ ಅಧ್ಯಕ್ಷರುಗಳಾಗಿ ಡಾ॥ ಬಾಬುರಾಜೇಂದ್ರಪ್ರಸಾದ್ ಮತ್ತು ಡಾ॥ ಬಿ.ಆರ್. ಅಂಬೇಡ್ಕರ್ ಅವರುಗಳು ನಿಯೋಜಿತ ಗೊಂಡರು. ಸಮಿತಿಯ ಸದಸ್ಯರಾಗಿ ಪಂಡಿತ್ ಜವಹರ್ ಲಾಲ್ ನೆಹರೂ, ಸರ್ದಾರ್ ವಲ್ಲಭಭಾಯಿ ಪಟೇಲ್, ಕೆ.ಎಂ. ಮುನ್ಷಿ, ಸರ್ವಪಲ್ಲಿ ರಾಧಾಕೃಷ್ಣನ್, ಕರ್ನಾಟಕದವರಾದ ಕೆಂಗಲ್ ಹನುಮಂತಯ್ಯ ಹಾಗೂ ನಿಜಲಿಂಗಪ್ಪನವರುಗಳಿದ್ದರು. ಇವರ ಜೊತೆ ತಜ್ಞರು ಹಾಗೂ ಮಹಾ ಮೇಧಾವಿಗಳು ಸಹಾ ಕಾರ್ಯ ನಿರ್ವಹಿಸಿದರು.

ಇಂಗ್ಲೆಂಡ್-ಐರ್ಲೆಂಡ್-ಕೆನಡಾ-ಅಮೆರಿಕಾ-ಆಸ್ಟ್ರೇಲಿಯಾ... ಮುಂತಾದ ರಾಷ್ಟ್ರಗಳ ಸಂವಿಧಾನವನ್ನು ಅಧ್ಯಯನಿಸಿದ ಸಂವಿಧಾನ ಕರಡು ಸಮಿತಿ ಕೊನೆಯದಾಗಿ ನಮ್ಮ ರಾಷ್ಟ್ರಕ್ಕೆ ಪೂರಕವಾಗುವ ಸಂಸದೀಯ ಮಾದರಿಯ ಒಕ್ಕೂಟ (Federal) ವ್ಯವಸ್ಥೆಯ ಸಂವಿಧಾನವನ್ನು ರೂಪಿಸಿತು. ಗಣರಾಜ್ಯ ವ್ಯವಸ್ಥೆಯ ಪ್ರಜಾಪ್ರಭುತ್ವ ಮೌಲ್ಯಗಳ ರಾಷ್ಟ್ರವಾಗಿ ಭಾರತ, ಜನವರಿ ೨೬, ೧೯೫೦ರಂದು ಅಧಿಕೃತ ವಾಗಿ ಉದಯಗೊಂಡಿತು.

ನಮ್ಮ ಸಂವಿಧಾನದ ೧ನೆಯ ವಿಧಿ ಪ್ರಕಾರ ಭಾರತ ಒಕ್ಕೂಟವಾಗಿದೆ. ಪರಮೋಚ್ಛ ಅಧಿಕಾರ ಪ್ರಜೆಗಳ ಕೈಯಲ್ಲಿರುವುದೇ ಗಣರಾಜ್ಯ ವ್ಯವಸ್ಥೆಯ ಅತ್ಯಂತ ಪ್ರಮುಖ ಅಂಶವಾಗಿದ್ದು, ಈ ಅರ್ಥದಲ್ಲಿ 'ಗಣರಾಜ್ಯ' ಎಂಬ ಪದವನ್ನು ಸಂವಿಧಾನದಲ್ಲಿ ಬಳಸಿಕೊಂಡಿದ್ದಾರೆ. ಯಾವುದೇ ವ್ಯಕ್ತಿ ಅಥವಾ ಗುಂಪಿನಲ್ಲಿಯೇ ಅಧಿಕಾರ ಶಾಶ್ವತವಾಗಿ ಉಳಿಯದಂತೆ ತಡೆಯುವ ಶಕ್ತಿ ಪ್ರಜೆಗಳಿಗಿದೆ. ಸಂವಿಧಾನದ ೭ನೇ ಅನುಸೂಚಿಯಲ್ಲಿ ಕೇಂದ್ರ ಮತ್ತು ರಾಜ್ಯಗಳ ನಡುವೆ ಅಧಿಕಾರಗಳನ್ನು ಹಂಚಲಾಗಿದೆ. ಸಂಸತ್ತಿನ ಮೇಲ್ಮನೆಯಾದ ರಾಜ್ಯಸಭೆ ರಾಜ್ಯಗಳನ್ನು ಪ್ರತಿನಿಧಿಸುತ್ತದೆ. ಕೇಂದ್ರ ಮತ್ತು ರಾಜ್ಯ ಸರ್ಕಾರಗಳು ಪ್ರಜೆಗಳಿಂದ ಆಯ್ಕೆಯಾಗಿ ಪ್ರತ್ಯೇಕ ಆಡಳಿತ ಸೇವೆಗಳನ್ನು ಹೊಂದಿವೆ. ಇವೆರಡೂ ಸರ್ಕಾರಗಳ ನಡುವೆ ಉಂಟಾಗಬಹುದಾದ ಎಲ್ಲಾ ವಿವಾದಗಳನ್ನು ಬಗೆಹರಿಸುವ ಅಧಿಕಾರ ಸುಪ್ರೀಂಕೋರ್ಟ್ ಹೊಂದಿದೆ. ನಮ್ಮ ಸಂವಿಧಾನದ ನಿರ್ಮಾತೃಗಳು ನಮ್ಮ ಸಂವಿಧಾನದಲ್ಲಿ ಮುಖ್ಯವಾಗಿ 'Liberty, Equality & Fraternity' ಗಳ ಕುರಿತು ವಿಶೇಷ ಗಮನ ಹರಿಸಿದ್ದು ಅತ್ಯಂತ ಗಮನಾರ್ಹ ಸಂಗತಿ ಎನ್ನಬಹುದು.

ದೇಶ ಸ್ವಾತಂತ್ರ್ಯ ಮತ್ತು ಸಂವಿಧಾನಪಡೆದು ಸುಮಾರು 60 ವರ್ಷಗಳಷ್ಟು ಕಳೆದಿದ್ದರೂ ಅವುಗಳ ಮಹತ್ವ ಮತ್ತು ಉದ್ದೇಶವನ್ನು ಅರಿಯುವಲ್ಲಿ ನಾವಿಂದು ವಿಫಲರಾಗಿದ್ದೇವೆ. ಸ್ವಾತಂತ್ರ್ಯಕ್ಕಾಗಿ ದೇಶಪ್ರೇಮಿಗಳು ಮಾಡಿದ ತ್ಯಾಗ-ಬಲಿದಾನಗಳ ನೆನಪು ನಮ್ಮ ಅಂತರಂಗದಿಂದ ದೂರವಾಗು ತ್ತಿದೆ. ದೇಶಭಕ್ತರು ಕಂಡಿದ್ದ ಕನಸು ಕನಸಾಗಿಯೇ ಉಳಿದಿದೆ. ಇಂದು ನಮ್ಮ ರಾಷ್ಟ್ರದ ಮುಂದೆ ಹಲವಾರು ಜ್ವಲಂತ ಸಮಸ್ಯೆಗಳು ಕಾಡುತ್ತಿವೆ.

ದೇಶ ಸ್ವಾತಂತ್ರ್ಯಗಳಿಸಿ ಅರ್ಧಶತಮಾನ ಕಳೆದರೂ ಬಡತನ, ನಿರುದ್ಯೋಗದಂತಹ ಸಮಸ್ಯೆಗಳನ್ನು ಕೊನೆ ಗಾಣಿಸಲು ಸಾಧ್ಯವಾಗಿಲ್ಲ ಪಂಚವಾರ್ಷಿಕ ಯೋಜನೆಗಳು ಮತ್ತು ೨೦ ಅಂಶಗಳ ಆರ್ಥಿಕ ಕಾರ್ಯಕ್ರಮಗಳು ಬಡ ಜನತೆಗೆ ಸಮರ್ಪಕವಾಗಿ ತಲುಪುವಲ್ಲಿ ವಿಫಲವಾಗಿದೆ. ಅನಕ್ಷರತೆ, ಆಂತರಿಕ ಕಲಹ, ಮಿತಿ ಮೀರಿದ ಜನಸಂಖ್ಯೆ, ಮೋಸ, ಹಿಂಸೆ, ಭ್ರಷ್ಟಾಚಾರ, ಭಯೋತ್ಪಾದನೆ, ರಾಜಕೀಯ ಕ್ಷೇತ್ರ ದಿಕ್ಕುತಪ್ಪುತ್ತಿರುವುದು.... ಮೊದಲಾದವುಗಳು ದೇಶದ ಸಮಗ್ರ ಹಿತ ಸಾಧಿಸಲು ಅಡ್ಡಿಯಾಗುತ್ತಿದೆ. ಅವುಗಳಿಂದ ರಾಷ್ಟ್ರ ಮುಕ್ತವಾಗಬೇಕಿದೆ. ನಾವೆಲ್ಲರೂ ಗಣರಾಜ್ಯ ವ್ಯವಸ್ಥೆಯಲ್ಲಿ ಅಪಾರ ನಂಬಿಕೆ ಮತ್ತು ವಿಶ್ವಸ ಹೊಂದಿದ್ದು, ಜಗತ್ತಿನಲ್ಲಿಯೇ ಅತಿದೊಡ್ಡ ಪ್ರಜಾತಂತ್ರ ವ್ಯವಸ್ಥೆಯ ರಾಷ್ಟ್ರವೆಂಬ

* ಬಿನ್ ಎಸ್. ವಾಸುದೇವ್, ಕುಚಲಕ್ಕಿ ಕೇರಿ, ಬಿ.ಹೆಚ್. ರಸ್ತೆ, ಶಿವಮೊಗ್ಗ-೫೭೭ ೨೦೧.

ಹೆಗ್ಗಳಿಗೆ ನಮ್ಮದು. ಅದು ಹುಸಿ ಯಾಗದಂತೆ ರಾಷ್ಟ್ರದ ಪ್ರತಿಯೊಂದು ಅಂಗವೂ ತನ್ನ ಕಾರ್ಯ ಮತ್ತು ಕರ್ತವ್ಯಗಳನ್ನು ನಿರ್ವಹಿಸಬೇಕು. ಗಣರಾಜ್ಯ ವ್ಯವಸ್ಥೆಯ ಸಂವಿಧಾನ ರೂಪಿಸಿಕೊಂಡು ನಾವು ಸಾಧಿಸಬೇಕಾಗಿರುವ ಮಹತ್ವಪೂರ್ಣ ಕಾರ್ಯಗಳು ಸಾಕಷ್ಟಿದ್ದು ಅವುಗಳನ್ನು ರಾಷ್ಟ್ರ ಸಾಧಿಸಬೇಕು.

ಪ್ರಜಾಪ್ರಭುತ್ವ ರಾಷ್ಟ್ರದಲ್ಲಿ ಪ್ರಜಾಮೌಲ್ಯಗಳು ಹಸಿರಾಗಿ ಉಳಿಯಲು ಜನತೆಗೆ ಯೋಗ್ಯವಾದ ಶಿಕ್ಷಣ ನೀಡುವುದು ಅತ್ಯಂತ ಅಗತ್ಯವಾಗಿದ್ದು ಅದನ್ನು ರಾಷ್ಟ್ರ ಸಾಧಿಸಬೇಕು. ಕೇವಲ ಬೌದ್ಧಿಕ ಜ್ಞಾನ ಪಡೆದು ಆರ್ಥಿಕ ಪರಿಸ್ಥಿತಿಯನ್ನು ಸುಧಾರಿಸಿಕೊಳ್ಳುವುದೇ ಶಿಕ್ಷಣದ ಉದ್ದೇಶವಾಗಿರಬಾರದು. ನಿಸ್ವಾರ್ಥ, ತ್ಯಾಗ, ರಾಷ್ಟ್ರಾಭಿಮಾನ ಮತ್ತು ರಾಷ್ಟ್ರದ ಸಮಗ್ರ ಹಿತ ಕಾಪಾಡುವಂತಹ ಸಹೃದಯದಂತಹ ಗುಣಮೌಲ್ಯ ಗಳನ್ನು ವಿಕಸಿಸುವಂತೆ ಮಾಡುವುದು ಶಿಕ್ಷಣದ ಪರಮ ಉದ್ದೇಶವಾಗಿರಬೇಕು. ಸರ್ಕಾರ ಸಂಸ್ಕಾರಯುತ ಶಿಕ್ಷಣ ನೀಡುವತ್ತ ಗಮನ ಹರಿಸುವುದು ಅತ್ಯಂತ ಅನಿವಾರ್ಯವಾಗಿದೆ.

ರಾಷ್ಟ್ರದ ಹಲವಾರು ಸಮಸ್ಯೆ ಮತ್ತು ವೈರುಧ್ಯಗಳ ನಡುವೆಯೂ ರಾಷ್ಟ್ರ ಸಾಧಿಸಿರುವ ಸಾಧನೆಗಳು ನಿಜಕ್ಕೂ ಪ್ರಶಂಸನೀಯವೆಂದರೆ ತಪ್ಪಾಗಲಾರದು. ನಮ್ಮ ರಾಷ್ಟ್ರ ವಿಜ್ಞಾನ ಮತ್ತು ತಾಂತ್ರಿಕತೆಯ ಕ್ಷೇತ್ರದಲ್ಲಿ ಸಾಕಷ್ಟು ಅಭಿವೃದ್ಧಿ ಸಾಧಿಸಿದೆ. ಕೃಷಿಯಲ್ಲಿ ಸ್ವಾವಲಂಬನೆ ಸಾಧಿಸಿದೆ. ಮಾಹಿತಿ ತಂತ್ರಜ್ಞಾನ ಮತ್ತು ಬಯೋಟೆಕ್ನಾಲಜಿ ವಿಷಯಗಳಲ್ಲಂತೂ ವಿಶ್ವದ ಗಮನ ಸೆಳೆದಿದೆ. ಬಾಹ್ಯ ಶತ್ರುಗಳಿಂದ ಉಂಟಾಗ ಬಹುದಾದ ಅಪಾಯಕಾರಿ ಯುದ್ಧ ಸನ್ನಿವೇಶಗಳನ್ನು ತಪ್ಪಿಸಲು ನಮ್ಮ ಸೈನಿಕಶಕ್ತಿ ಅತ್ಯಂತ ಸಮರ್ಥವಾಗಿದೆ. ಆಧುನಿಕ ತಂತ್ರಜ್ಞಾನದ ಸ್ವದೇಶಿ ಯುದ್ಧ ಕ್ಷಿಪಣಿಗಳನ್ನು ತಯಾರಿಸುವುದರ ಮೂಲಕ ನಮ್ಮ ರಕ್ಷಣಾ ವ್ಯವಸ್ಥೆ ಇನ್ನಷ್ಟು ಬಲಿಷ್ಠಗೊಂಡಿದೆ. ಸ್ವದೇಶಿ ತಂತ್ರಜ್ಞಾನ ಬಳಸಿ ಚಂದ್ರ ಲೋಕಕ್ಕೂ ಉಪಗ್ರಹ ಕಳುಹಿಸಿ ವಿಶ್ವಮಟ್ಟದಲ್ಲಿ ಮನ್ನಣೆ ಪಡೆದಿರುವುದು ರಾಷ್ಟ್ರದ ಹಿರಿಮೆಗೆ ಹಿಡಿದ ಕೈಗನ್ನಡಿ ಯಾಗಿದೆ. ಪರಮಾಣು ವಿಜ್ಞಾನವನ್ನು ದೇಶದ ಅಭಿವೃದ್ಧಿ ಮತ್ತು ಸುರಕ್ಷತೆಯ ದೃಷ್ಟಿಯಿಂದ ಬಳಸಿಕೊಂಡು ರಾಷ್ಟ್ರ ಪ್ರಗತಿ ಸಾಧಿಸಿರುವುದು ಇಡೀ ಜಗತ್ತಿಗೇ ಆದರ್ಶಪ್ರಾಯ ವೆನ್ನಬಹುದು.

ವಿಶ್ವದ ಎಲ್ಲಾ ರಾಷ್ಟ್ರಗಳ ನಡುವೆಯೂ ಉತ್ತಮ ಬಾಂಧವ್ಯವನ್ನು ಹೊಂದಿರುವ ಭಾರತ ವಿಶ್ವಕ್ಕೆ ಪಂಚಶೀಲದ ಮಹತ್ವವನ್ನು ಸಾರಿದೆ. ಶಾಂತಿ, ಸಹಬಾಳ್ವೆ, ಸಮನ್ವಯತೆ ಮತ್ತು ಭ್ರಾತೃತ್ವಗಳಿಗೆ ದೇಶ ಮಾತೃವೇದಿಕೆಯಾಗಿ ಎಲ್ಲರನ್ನೂ ಮಾತೃಪ್ರೇಮದಿಂದ ಕೈಬೀಸಿ ಕರೆಯುವುದರ ಮೂಲಕ ತನ್ನ ಸಹಜ ಸಂಸ್ಕೃತಿಯ ಗುಣವನ್ನು ಅಭಿವ್ಯಕ್ತ ಗೊಳಿಸಿರುವುದು ನಮ್ಮ ರಾಷ್ಟ್ರದ ಹೆಮ್ಮೆಯ ಸಂಗತಿ ಎನ್ನ ಬಹುದು. ನಮ್ಮ ಸಂವಿಧಾನದಲ್ಲಿ ಯಾವುದೆಲ್ಲಾ ಮುಖ್ಯ ಆಶಯಗಳನ್ನು ಹೊಂದಿದೆಯೋ ಆ ಎಲ್ಲಾ ಮುಖ್ಯ ಆಶಯಗಳನ್ನು ಹನ್ನೆರಡನೇ ಶತಮಾನದಲ್ಲಿಯೇ ಮಹಾ ಮಾನವತಾವಾದಿ ಗುರುಬಸವಣ್ಣನವರು ಸಾಕಾರಗೊಳಿಸಿದ್ದ ರೆಂಬುದನ್ನು ನಾವಿಂದು ಸ್ಮರಿಸಬಹುದು. ಮೊಟ್ಟಮೊದಲ ಪ್ರಜಾಸತ್ತಾತ್ಮಕ ವ್ಯವಸ್ಥೆಯ 'ಅನುಭವ ಮಂಟಪ' (ಪಾರ್ಲಿಮೆಂಟ್) ವನ್ನು ನಿರ್ಮಿಸಿದ ಕೀರ್ತಿ ಅವರದು. ಅವರ ವಚನ ಸಂದೇಶದಲ್ಲಿ ಕಲ್ಯಾಣ ರಾಷ್ಟ್ರ ನಿರ್ಮಾಣಕ್ಕೆ ಬೇಕಾದ ಎಲ್ಲಾ ತತ್ತ್ವಗಳನ್ನು ನಾವು ಕಾಣಬಹುದು. ನಾವಿಂದು ಅವುಗಳನ್ನು ಅರ್ಥೈಸಿಕೊಂಡು ಸಾಗಬೇಕು. ಅವರ ವಚನ ಸಂದೇಶಗಳ ಕಾರ್ಯಸೂಚಿಯಂತೆ ರಾಷ್ಟ್ರ ನಿರ್ಮಿಸುವ ಮಹಾಕಾರ್ಯಕ್ಕೆ ನಮ್ಮ ರಾಜಕೀಯ ನೇತಾರರು ಮುಂದಾಗಬೇಕು.

ಪ್ರಸ್ತುತ ದಿನಗಳಲ್ಲಿ ಪ್ರಜಾಪ್ರಭುತ್ವದ ಮೌಲ್ಯಗಳನ್ನು ರಾಜಕೀಯ ಪಕ್ಷಗಳು ಕಡೆಗಣಿಸುತ್ತಿರುವುದು ನಿಜಕ್ಕೂ ವಿಷಾದನೀಯ. ಯವುದೇ ಕಾರಣಕ್ಕೂ ಪ್ರಜಾತಂತ್ರದ ಮೌಲ್ಯಗಳನ್ನು ಬಲಿಕೊಟ್ಟು ಅಧಿಕಾರ ನಡೆಸುವುದು ಪ್ರಜಾತಾಂತ್ರಿಕ ವ್ಯವಸ್ಥೆಗೇ ಕಪ್ಪುಚುಕ್ಕಿ ಎಂದರೆ ತಪ್ಪಾಗಲಾರದು. ಯಾವುದೇ ರಾಜಕೀಯಪಕ್ಷವೂ ಸಹ ಗಣರಾಜ್ಯ ತತ್ತ್ವಗಳನ್ನು ಕಡೆಗಣಿಸಬಾರದು. ಒಕ್ಕೂಟ ವ್ಯವಸ್ಥೆಯಲ್ಲಿ ಯಾವುದೊಂದು ರಾಜ್ಯಕ್ಕೂ ಅನ್ಯಾಯವಾಗಬಾರದು. ಪ್ರತಿಯೊಂದಿ ರಾಜ್ಯಗಳ ಸರ್ವಾಂಗೀಣ ಅಭಿವೃದ್ಧಿಯೇ ಸಮಗ್ರ ರಾಷ್ಟ್ರದ ಅಭಿವೃದ್ಧಿಯೆಂಬ ಮೂಲ ಮಂತ್ರವನ್ನು ಸದಾ ಪಠಿಸಬೇಕು. ಆ ಮೂಲಕ ರಾಷ್ಟ್ರದ ಸಾರ್ವಭೌಮತೆಯನ್ನು ಕಾಪಾಡಬಹುದು.

ನಾವೆಲ್ಲರು ರಾಷ್ಟ್ರಪ್ರೇಮ-ರಾಷ್ಟ್ರಾಭಿಮಾನಗಳಂತಹ ಸದ್ಗುಣಗಳನ್ನು ಬೆಳೆಸಿಕೊಳ್ಳುವುದರ ಮೂಲಕ ರಾಷ್ಟ್ರದ ಸನಾತನ ಸಂಸ್ಕೃತಿಯನ್ನು ಸಂರಕ್ಷಿಸಬೇಕು. ನಿಸ್ವಾರ್ಥ, ತ್ಯಾಗ, ಅಹಿಂಸೆ ಮತ್ತು ಭ್ರಾತೃತ್ವ, ಗುಣಮೌಲ್ಯಗಳು ನಮ್ಮ ಮನದಾಳದಲ್ಲಿ ಬೇರೂರಬೇಕು. ರಾಷ್ಟ್ರದ ಸಾರ್ವಭೌಮತ್ವ ರಕ್ಷಣೆಗಾಗಿ ನಾವು ಯಾವುದೇ ತ್ಯಾಗಕ್ಕೂ ಸಿದ್ಧರಿರಬೇಕು. ನಮ್ಮೆಲ್ಲಾ ಯಾವುದೇ ಕಾರ್ಯ ಅಥವಾ ಹೋರಾಟ ರಾಷ್ಟ್ರದ ಸಾರ್ವ ಭೌಮತ್ವಕ್ಕೆ ಪೂರಕವಾಗಿರಬೇಕು. ಸಾರ್ವಭೌಮತ್ವ, ಏಕತೆ, ಸಮಾನತೆ ಮತ್ತು ಭ್ರಾತೃತ್ವಗಳು ನಮ್ಮ ರಾಷ್ಟ್ರಧರ್ಮವಾಗಬೇಕು. 60ನೇ ಗಣ ರಾಜ್ಯೋತ್ಸವ ಆಚರಿಸುತ್ತಿರುವ ಈ ಸಂದರ್ಭದಲ್ಲಿ ರಾಜ್ಯೋತ್ಸವ ರಾಷ್ಟ್ರಪ್ರೇಮದ ಜಾಗೃತಿಗೆ ಸಂಕೇತವಾಗಬೇಕು. ಆ ದಿಕ್ಕಿನಲ್ಲಿ ಆಚರಿಸುವ ಗಣರಾಜ್ಯೋತ್ಸವದ ಆಚರಣೆ ನಮ್ಮದಾಗಲಿ.







## ಜ್ಯೋತಿ ಬೆಳಗಿಸುವುದು

-ಎಚ್.ಎಸ್. ಸಿದ್ಧಗಂಗಪ್ಪ*

ಯಾವುದೇ ಸಮಾರಂಭವಿರಲಿ ಹಿರಿಯರಿಂದ, ಮುಖ್ಯ ಅತಿಥಿಗಳಿಂದ ದೀಪ ಬೆಳಗಿಸುವುದರ ಮೂಲಕ ಉದ್ಘಾಟಿಸ ಲಾಗುತ್ತದೆ. ಜ್ಯೋತಿ ಬೆಳಗಿಸದ ಸಮಾರಂಭವೇ ನಡೆಯುವುದಿಲ್ಲ. ಹಿತ್ತಾಳೆಯ ಅಥವಾ ಬೆಳ್ಳಿಯ ದೀಪಸ್ತಂಭ ಐದು ಬತ್ತಿಗಳಿಂದ ಕೂಡಿದ ಬಟ್ಟಲು. ಅದರ ತುಂಬ ಎಣ್ಣೆ. ಮೂಲತಃ ಜ್ಯೋತಿ ಬೆಳಗಿಸುವ ಕ್ರಿಯೆ ಸಾಂಕೇತಿಕ ವಾದುದು. ಕೆಲವೊಮ್ಮೆ ಹಚ್ಚಿದ ದೀಪ ಸಮಾರಂಭ ಮುಗಿಯುವ ಮುನ್ನವೇ ನಂದಿ ಹೋಗುತ್ತದೆ. ಕಾರ್ಯಕ್ರಮ ವನ್ನು ವ್ಯವಸ್ಥೆ ಮಾಡಿದ ವ್ಯವಸ್ಥಾಪಕರಿಗೆ ಸಮಾರಂಭ ಮುಗಿಯುವವರಿಗಾದರೂ ದೀಪ ಉರಿಯುವಂತೆ ನೋಡಿ ಕೊಳ್ಳಬೇಕೆಂಬ ಪ್ರಾಥಮಿಕ ಜ್ಞಾನವೂ ಇದ್ದಂತೆ ಕಾಣುವುದಿಲ್ಲ. ಎಣ್ಣೆ ಮುಗಿದ ಕೂಡಲೇ ದೀಪ ಆರಿ ಹೋಗುತ್ತದೆ. ಅದರೆ ಯಾವುದೇ ಹೊರಗಿನ ದೀಪ ಶಾಶ್ವತವಾಗಿ ಬೆಳಗುವುದಿಲ್ಲ ಎಂಬುದು ಕಟುಸತ್ಯವಾದರೂ ಸಮಾರಂಭ ಮುಗಿಯುವವ ರಿಗಾದರೂ ಉರಿಯುವಂತೆ ನೋಡಿಕೊಳ್ಳಬೇಕು. ಆಗ ದೀಪ ಹಚ್ಚಿದವರಿಗೂ ಗೌರವ, ಸಮಾರಂಭಕ್ಕೂ ಭೂಷಣ.

ಹೊರಗೆ ಬೆಳಗುವ ದೀಪ ಸಾಂಕೇತಿಕವಾದರೂ, ಆ ದೀಪ ಅಂತರಂಗದಲ್ಲಿ ಸದಾ ಬೆಳಗುವಂತೆ ಎಚ್ಚರ ವಹಿಸ ಬೇಕು. ಅಂತರಂಗದ ದೀಪದಲ್ಲಿ ಬತ್ತಿ ಸದಾ ಇರುವಂತೆ ನೋಡಿಕೊಳ್ಳಬೇಕು. ಅಂತರಂಗದಲ್ಲಿ ಕವಿದಿರುವ ಅಜ್ಞಾನ, ಮೂಢನಂಬಿಕೆ, ದ್ವೇಷ, ಮತ್ಸರ, ಅಸೂಯೆ, ಅಹಂಕಾರ, ಮದ, ಮೋಹ ಮೊದಲಾದವು ನಾವು ಅಂತರಂಗದಲ್ಲಿ ಹಚ್ಚುವ ದೀಪದ ಬೆಳಕಿನಲ್ಲಿ ಕರಗಿ ಹೋಗಬೇಕು. ಮೂಲೆ ಮೂಲೆಯಲ್ಲಿ ಬೆಳಕು ಹರಡುವಂತೆ ಜಾಗ್ರತೆ ವಹಿಸಬೇಕು.

ಜ್ಞಾನಪೀಠ ಪ್ರಶಸ್ತಿ ಪುರಸ್ಕೃತ ಡಾ|| ಮಾಸ್ತಿಯವರು ತಮ್ಮ **'ಯಶೋಧರಾ'** ನಾಟಕದಲ್ಲಿ ಬುದ್ಧನ ಪಾತ್ರದ ಮೂಲಕ ಅರ್ಥಪೂರ್ಣವಾದ, ಸಾರ್ವಕಾಲಿಕವಾದ ಮಾತನ್ನು ಹೇಳಿಸಿದ್ದಾರೆ. **'ಒಳಗೆ ಬೆಳಗುವ ಬೆಳಕ್ ಸರಿಪಡಿಸಿಕೊಳ್ಳಬೇಕು'** ಇದನ್ನು ಉಪನಿಷತ್ತಿನಲ್ಲಿ

**ಅಸತೋಮಾ ಸದ್ಗಮಯ**
**ತಮಸೋಮಾ ಜ್ಯೋತಿರ್ಗಮಯ**
**ಮೃತ್ಯೋರ್ಮಾ ಅಮೃತಂಗಮಯ**

ಎಂದು ಹೇಳಿದೆ. ಹೊರಗಿನ ದೀಪ ಬೆಳಗಿಸಲು ಸಾಮಾನ್ಯವಾದ ಎಣ್ಣೆ ಬತ್ತಿಗಳಾದರೆ ಸಾಕು. ಆದರೆ ಅಂತರಂಗದ ದೀಪ ಬೆಳಗಲು ಮಾನವೀಯ ಮೌಲ್ಯ ಗಳುಳ್ಳ ಎಣ್ಣೆಯನ್ನು ಬಳಸಬೇಕು. ಆ ದೀಪ ಆರದಂತೆ ತಡೆಯಬೇಕಾದುದು ಕಾಮ, ಕ್ರೋಧ, ಲೋಭ, ಮೋಹ, ಮದ, ಮತ್ಸರಗಳ ಚಂಡಮಾರುತವನ್ನು. ತೆಗೆಯ ಬೇಕಾದದ್ದು ಆಗಾಗ ಬತ್ತಿಗೆ ಅಂಟಿಕೊಂಡ ಅಜ್ಞಾನ, ಅವಿದ್ಯೆಯ ಕಿಟ್ಟವನ್ನು.

ಪ್ರತಿಯೊಬ್ಬರಲ್ಲೂ ಅಂತರಂಗದ ಜ್ಯೋತಿ ಬೆಳಗು ತ್ತಿರುತ್ತದೆ. ಕೆಲವರು ತುಂಬಾ ಎಚ್ಚರಿಕೆಯಿಂದ ಅದು ಸದಾ ಬೆಳಗುವಂತೆ ನೋಡಿಕೊಳ್ಳುತ್ತಾರೆ. ಮತ್ತೆ ಕೆಲವರು ಉದಾಸೀನದಿಂದ ನಂದಿ ಹೋಗಲು ಬಿಡುತ್ತಾರೆ. ಕತ್ತಲೆ ಆವರಿಸಿ ಅವರ ಬದುಕು ನರಕಸದೃಶವಾಗುತ್ತದೆ. ಅಂತರಂಗದಲ್ಲಿ ನಿರಂತರವಾಗಿ ಪ್ರಜ್ವಲಿಸುತ್ತಿದ್ದರೆ ಜೀವನವು ಸುಂದರವಾಗಿರುತ್ತದೆ.

* 53/1, 'ಶಿವಕೃಪ', ಮೊದಲನೇ ಮುಖ್ಯರಸ್ತೆ, ಕಾವೇರಿ ಬಡಾವಣೆ, ನಾಗರಬಾವಿ ರಸ್ತೆ, ವಿಜಯನಗರ, ಬೆಂಗಳೂರು.

ಪ್ರಪಂಚದಲ್ಲಿ ಬಹಳ ಮಂದಿ ಪರಿಪೂರ್ಣ ಜೀವನದ ಅರ್ಥ ಮಾಡಿಕೊಂಡಿಲ್ಲ. ಅಪರಿಪೂರ್ಣ ಜೀವನವನ್ನೇ ಪರಿಪೂರ್ಣ ಎಂಬ ಭ್ರಮೆ, ಭ್ರಾಂತಿಯ ಜೀವನವನ್ನು ನಡೆಸುತ್ತಿದ್ದಾರೆ. ಆದ್ದರಿಂದ ಪರಿಪೂರ್ಣ ಜೀವನದ ಅರ್ಥವನ್ನು ಮಾಡಿಕೊಳ್ಳುವುದು ಬಹಳ ಮುಖ್ಯವಾದುದು.

-ಶ್ರೀವಾಣಿ

|| ಓಂ ಶ್ರೀ ಗುರುಬಸವಲಿಂಗಾಯ ನಮಃ ||



ಅವಾಚ್ಯಾತ್ಮ ಸ್ವರೂಪಾಯ ಶಿವಭಾವ ಪ್ರದಾಯಿನೇ ।
ನಮಸ್ಸದ್ಗುರುನಾಥಾಯ ಷಟ್ಸ್ಥಲ ಬ್ರಹ್ಮಮೂರ್ತಯೇ ॥

# ಶ್ರೀ ಸಿದ್ಧಲಿಂಗೇಶ್ವರಸ್ವಾಮಿ ಜಾತ್ರಾ ಮಹೋತ್ಸವ ಆಹ್ವಾನ ಪತ್ರಿಕಾ

## ಶ್ರೀ ಸಿದ್ಧಗಂಗಾ ಮಠ, ತುಮಕೂರು - 572 104

ಶ್ರೀ ..........................................................................................

ಸ್ವಸ್ತಿ ಶ್ರೀ ವಿಜಯಾಭ್ಯುದಯ ಶಾಲಿವಾಹನ ಶಕ 1931ನೇ ಶ್ರೀ ವಿರೋಧಿನಾಮ ಸಂವತ್ಸರ

| | | | | |
|---|---|---|---|---|
| ಮಾಘ ಬಹುಳ ಅಷ್ಟಮಿ | 06-02-2010 | ಶನಿವಾರ | ಬೆಳಿಗ್ಗೆ | ಶ್ರೀ ಗೋಸಲ ಸಿದ್ಧೇಶ್ವರಸ್ವಾಮಿ ಉತ್ಸವ ಮತ್ತು |
| | | | ಸಂಜೆ 7.00ಕ್ಕೆ | ಶೂನ್ಯ ಸಿಂಹಾಸನಾರೋಹಣೋತ್ಸವ (ನೂತನವಾಗಿ ನಿರ್ಮಿಸಿರುವ ಬೆಳ್ಳಿ ರಥ) ವೃಷಭ ವಾಹನ |
| ಮಾಘ ಬಹುಳ ನವಮಿ | 07-02-2010 | ಭಾನುವಾರ | ಸಂಜೆ | ನಂದಿವಾಹನ ಮತ್ತು ಗಜ ವಾಹನ |
| ಮಾಘ ಬಹುಳ ದಶಮಿ | 08-02-2010 | ಸೋಮವಾರ | ಸಂಜೆ | ಹುಲಿವಾಹನ ಮತ್ತು ಸಿಂಹವಾಹನ |
| ಮಾಘ ಬಹುಳ ಏಕಾದಶಿ | 09-02-2010 | ಮಂಗಳವಾರ | ಸಂಜೆ | ಶೇಷವಾಹನ ಮತ್ತು ಹುತ್ತದವಾಹನ |
| ಮಾಘ ಬಹುಳ ದ್ವಾದಶಿ | 10-02-2010 | ಬುಧವಾರ | ಸಂಜೆ | ಅಶ್ವವಾಹನ ಮತ್ತು ನವಿಲು ವಾಹನ |
| ಮಾಘ ಬಹುಳ ತ್ರಯೋದಶಿ | 11-02-2010 | ಗುರುವಾರ | ಸಂಜೆ | ರಾವಣವಾಹನ, ಬಿಲ್ವವೃಕ್ಷವಾಹನ ಮತ್ತು ನವರಂಗಪಾಲಕಿ ಉತ್ಸವ |
| ಮಾಘ ಬಹುಳ ಚತುರ್ದಶಿ | 12-02-2010 | ಶುಕ್ರವಾರ | | ಮಹಾಶಿವರಾತ್ರಿ ಪೂಜಾದಿಗಳು, ಮುತ್ತಿನ ಪಾಲಕಿ ಉತ್ಸವ |
| ಮಾಘ ಬಹುಳ ಅಮಾವಾಸ್ಯೆ • | 13-02-2010 | ಶನಿವಾರ | | **ಶ್ರೀ ಸಿದ್ಧಲಿಂಗೇಶ್ವರಸ್ವಾಮಿ ಮಹಾರಥೋತ್ಸವ** ಸಂಜೆ ರುದ್ರಾಕ್ಷಿ ಮಂಟಪೋತ್ಸವ |
| ಮಾಘ ಬಹುಳ ಅಮಾವಾಸ್ಯೆ • | 14-02-2010 | ಭಾನುವಾರ | ರಾತ್ರಿ 11ಗಂಟೆಗೆ | **ಬೆಳ್ಳಿಪಾಲಕಿ ಉತ್ಸವ** |
| ಫಾಲ್ಗುಣ ಶುದ್ಧ ಪ್ರಥಮ | 15-02-2010 | ಸೋಮವಾರ | | ತೆಪ್ಪೋತ್ಸವ ಮತ್ತು ಪಂಚಬ್ರಹ್ಮೋತ್ಸವ |

ಮಾಮೂಲಿನಂತೆ ದಿನಾಂಕ 06-02-2010 ಶನಿವಾರ ರಿಂದ "ಎತ್ತಿನ ಪರಿಷೆಯು" ಪ್ರಾರಂಭವಾಗುತ್ತದೆ ಮತ್ತು "ದನಗಳ ಪ್ರದರ್ಶನ" ಮತ್ತು ಉತ್ತಮ ರಾಸುಗಳಿಗೆ ಬಹುಮಾನ ವಿತರಣೆಯೂ ನಡೆಯುವಂತೆ ಏರ್ಪಡಿಸಿದೆ. ಪ್ರತಿದಿನ ಸಂಜೆ ನಡೆಯುವ ಸಾಮೂಹಿಕ ಪ್ರಾರ್ಥನೆಯೊಂದಿಗೆ ವಿದ್ವಾಂಸರಿಂದ ಧಾರ್ಮಿಕ ಉಪನ್ಯಾಸಗಳು ಜರುಗುತ್ತವೆ. "ಕೃಷಿ ಮತ್ತು ಕೈಗಾರಿಕಾ ವಸ್ತು ಪ್ರದರ್ಶನ" ದಲ್ಲಿ ಪ್ರತಿದಿನವೂ ಸಾಯಂಕಾಲ "ಸಾಂಸ್ಕೃತಿಕ ಚಟುವಟಿಕೆಗಳೂ" ನಡೆಯುತ್ತವೆ.

ಸರ್ವರೂ ಎಲ್ಲಾ ಉತ್ಸವಗಳಲ್ಲಿ ಭಾಗವಹಿಸಿ ಶ್ರೀ ಸಿದ್ಧಲಿಂಗೇಶ್ವರಸ್ವಾಮಿ ಕೃಪೆಗೆ ಪಾತ್ರರಾಗಬೇಕಾಗಿ ಅಪೇಕ್ಷಿಸುತ್ತೇವೆ.

**ಶ್ರೀ ಸಿದ್ಧಗಂಗಾ ಮಠ**
ತುಮಕೂರು ಜಿಲ್ಲೆ.

**ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳು**
ಶ್ರೀ ಸಿದ್ಧಗಂಗಾ ಕ್ಷೇತ್ರಾಧ್ಯಕ್ಷರು





# ಉತ್ತರ ಕರ್ನಾಟಕದ ಅತಿವೃಷ್ಟಿ ಹಾಗೂ ಪ್ರವಾಹ ಸಂತ್ರಸ್ತರ ಪುನರ್ವಸತಿ ಯೋಜನೆ

## ಶ್ರೀ ಸಿದ್ಧಗಂಗಾಮಠ, ತುಮಕೂರು.

**ಆತ್ಮೀಯರೇ,**

ಕರ್ನಾಟಕ ರಾಜ್ಯದ ಇತಿಹಾಸದಲ್ಲೇ ಕಂಡು ಕೇಳರಿಯದ ಅತಿವೃಷ್ಟಿ ಹಾಗೂ ಪ್ರವಾಹದಿಂದ ಉತ್ತರ ಕರ್ನಾಟಕದ ಸುಮಾರು ಹದಿನೈದು ಜಿಲ್ಲೆಗಳು ಪ್ರಕೃತಿ ವಿಕೋಪಕ್ಕೆ ತುತ್ತಾಗಿ ಜನಜೀವನ ಸಂಪೂರ್ಣ ತಲ್ಲಣಗೊಂಡಿದೆ. ಜನ ಜಾನುವಾರುಗಳ ಪ್ರಾಣ ಹಾನಿಯಾಗಿದೆ. ಲಕ್ಷಾಂತರ ಜನ ಮನೆಮಾರು ಕಳೆದುಕೊಂಡು ನಿರಾಶ್ರಿತರಾಗಿದ್ದಾರೆ. ಸಾವಿರಾರು ಎಕರೆ ಬೆಳೆ ನಾಶವಾಗಿದೆ. ಸುಮಾರು 150ರಿಂದ 200 ಲಕ್ಷ ಜನರು ಅಸ್ತಿಪಾಸ್ತಿ ಕಳೆದುಕೊಂಡು ಊಟ, ವಸತಿಯಿಲ್ಲದೆ ಕಂಗಾಲಾಗಿ ಸಂಕಷ್ಟ ಪರಿಸ್ಥಿತಿಯನ್ನು ಎದುರಿಸುತ್ತಿದ್ದಾರೆ. ಹೊತ್ತು ಹೊತ್ತಿನ ಊಟಕ್ಕಾಗಿ ಸರ್ಕಾರದ ಗಂಜಿ ಕೇಂದ್ರಗಳನ್ನು ಅವಲಂಬಿಸಿದ್ದಾರೆ. ಅವರ ಭವಿಷ್ಯದ ಬದುಕು ಭೀಕರವೂ, ಅಂಧಕಾರಮಯವೂ ಆಗಿದೆ. ಒಟ್ಟಾರೆ 20 ಸಾವಿರ ಕೋಟಿಗೂ ಹೆಚ್ಚು ಹಾನಿಯಾಗಿದೆ ಎಂದು ಅಂದಾಜಿಸಲಾಗಿದೆ.

ಇಂತಹ ಸನ್ನಿವೇಶದಲ್ಲಿ ಅನಿರೀಕ್ಷಿತ ಆಘಾತಕ್ಕೆ ಒಳಗಾದ ಜನರ ಕಷ್ಟ ನಷ್ಟಗಳಿಗೆ ಪ್ರತಿಯೊಬ್ಬ ನಾಗರಿಕನೂ ಮಾನವೀಯತೆ ದೃಷ್ಟಿಯಿಂದ ಎಲ್ಲ ರೀತಿಯಿಂದ ಸ್ಪಂದಿಸಬೇಕಾದುದು ಅತ್ಯಂತ ಅವಶ್ಯಕ. ಈಗಾಗಲೇ ಕೇಂದ್ರ, ರಾಜ್ಯ ಸರ್ಕಾರಗಳು, ಮಠಮಾನ್ಯಗಳೂ, ಸಂಘ ಸಂಸ್ಥೆಗಳು ಹಾಗೂ ಸಾರ್ವಜನಿಕರೂ ಸಂತ್ರಸ್ತರ ನೆರವಿಗೆ ಧಾವಿಸಿ ಕಾರ್ಯ ನಿರ್ವಹಿಸುತ್ತಿವೆ. ಎಲ್ಲವನ್ನೂ ಕಳೆದುಕೊಂಡು ಬೀದಿಗೆ ಬಿದ್ದಿರುವ ನಮ್ಮ ಸೋದರ ಸೋದರಿಯರ ಬದುಕಿನಲ್ಲಿ ಭರವಸೆ ಹುಟ್ಟಿಸಬೇಕಾಗಿದೆ. ಲಕ್ಷಾಂತರ ಮನೆಗಳು ಸಂಪೂರ್ಣ ಹಾಗೂ ಭಾಗಶಃ ಹಾಳಾಗಿವೆ. ಹೊಸದಾಗಿ ವಾಸಕ್ಕಾಗಿ ಮನೆಗಳ ನಿರ್ಮಾಣ, ತಾತ್ಕಾಲಿಕ ವಸತಿ, ಆಹಾರ, ಆರೋಗ್ಯ, ಪಾಠಶಾಲೆಗಳು ಮತ್ತು ಆಸ್ಪತ್ರೆಗಳನ್ನು ಕಟ್ಟಿ ಕೊಡುವ ಬೃಹತ್ತಾದ ಜವಾಬ್ದಾರಿಯನ್ನು ಸರ್ಕಾರ, ಸಂಘ ಸಂಸ್ಥೆಗಳು ಮತ್ತು ಸಾರ್ವಜನಿಕರು ಕೂಡಿ ನಿರ್ವಹಿಸಬೇಕಾಗಿದೆ.

ಈ ಉದ್ದೇಶದಿಂದ ಶ್ರೀಮಠವೂ ಕೂಡ ಒಂಭತ್ತು ಸಾವಿರ ಬಡ ಹಾಗೂ ಅನಾಥ ಮಕ್ಕಳ ಉಚಿತ ವಿದ್ಯಾಭ್ಯಾಸ ಊಟ ಮತ್ತು ವಸತಿಯ ನಿರ್ವಹಣೆಯ ಜೊತೆಗೆ ಸುಮಾರು 200 ಮನೆಗಳನ್ನು ಕಟ್ಟಿಕೊಡಲು ಈಗಾಗಲೇ ತೀರ್ಮಾನ ತೆಗೆದುಕೊಂಡಿದೆ.

ಇದಕ್ಕಾಗಿ ರಾಯಚೂರು ಜಿಲ್ಲಾಧಿಕಾರಿಯನ್ನು ಸಂಪರ್ಕಿಸಿ ಮಾನ್ವಿ ತಾಲ್ಲೂಕಿನ 'ಚೀಕಲಪರ್ವಿ' ಮತ್ತು 'ಕಾತರಕಿ' ಗ್ರಾಮಗಳನ್ನು ಹಾಗೂ ಸಿಂಧನೂರು ತಾಲ್ಲೂಕಿನ 'ಒಳಬಳ್ಳಾರಿ' ಗ್ರಾಮವನ್ನು ಸಂದರ್ಶಿಸಿ ಪರಿಶೀಲಿಸಲಾಗಿದೆ. ಚೀಕಲಪರ್ವಿ ಅಥವಾ ಒಳಬಳ್ಳಾರಿ ಗ್ರಾಮದಲ್ಲಿ ಹೊಸದಾಗಿ 200 ವಸತಿ ಗೃಹಗಳನ್ನು ಕಟ್ಟಿಕೊಡಲು ನಕ್ಷೆ ತಯಾರಿಸಲಾಗಿದೆ. ಇದರ ಒಟ್ಟು ವೆಚ್ಚ ಸುಮಾರು 250 ಲಕ್ಷ ರೂಪಾಯಿಗಳು ಬೇಕಾಗಬಹುದೆಂದು ಅಂದಾಜಿಸಲಾಗಿದೆ. ಈ ಉದ್ದೇಶಕ್ಕಾಗಿ ಶ್ರೀಮಠದ ಅಭಿಮಾನಿಗಳು, ಭಕ್ತಾದಿಗಳು, ಸಂಘ ಸಂಸ್ಥೆಗಳು ಹಾಗೂ ಸಾರ್ವಜನಿಕರು ಉದಾರವಾಗಿ ಆರ್ಥಿಕ ನೆರವು ನೀಡುವುದರ ಮೂಲಕ ಈ ಪವಿತ್ರ ಕಾರ್ಯದಲ್ಲಿ ಭಾಗವಹಿಸಬೇಕೆಂದು ಆಶಿಸಲಾಗಿದೆ. ಲಕ್ಷಕ್ಕೊಂದರಂತೆ ನಿರ್ಮಿತ ಮನೆಗಳಿಗೆ ದಾನಿಗಳ (ಸಂಘ ಸಂಸ್ಥೆಗಳ) ಹೆಸರಿನ ಫಲಕಗಳನ್ನು ಅಳವಡಿಸಲಾಗುವುದು.

ಈ ಪುನರ್ವಸತಿ ಕಾರ್ಯವು ಎಲ್ಲ ಸಹೃದಯರ ಉದಾರ ಸಹಾಯದಿಂದ ಮಾತ್ರ ಕಾರ್ಯಗತಗೊಳಿಸಲು ಸಾಧ್ಯ. ಅತಿವೃಷ್ಟಿ ಹಾಗೂ ಪ್ರವಾಹದಿಂದ ಊಹಿಸಲಸಾಧ್ಯವಾದ ಕಷ್ಟ ನಷ್ಟ ಮತ್ತು ನೋವು ಅನುಭವಿಸುತ್ತಿರುವ ನಮ್ಮ ಬಾಂಧವರ ನೆರವಿಗೆ ಧಾವಿಸೋಣ. ಅವರಿಗೆ ಹೊಸ ಬದುಕು ಕಟ್ಟಿಕೊಡಲು ಸಹಕರಿಸುವುದರ ಮೂಲಕ ಮಾನವೀಯತೆಯನ್ನು ಮೆರೆಯೋಣ. ಈ ಪವಿತ್ರ ಕಾರ್ಯಕ್ಕಾಗಿ ತಾವು ತಮ್ಮ ನೆರವನ್ನು 'ಶ್ರೀ ಶ್ರೀ ಶಿವಕುಮಾರಸ್ವಾಮೀಜಿ, ಶ್ರೀ ಸಿದ್ಧಗಂಗಾಮಠ' ಇವರ ಹೆಸರಿಗೆ ಚೆಕ್ ಮೂಲಕ ನೀಡಬಹುದು. ನಗದು ಮೊಬಲಗನ್ನು ನೇರವಾಗಿ ಕೊಟ್ಟು ರಶೀದಿ ಪಡೆಯಬಹುದು. ದಾನಿಗಳ ದೇಣಿಗೆಗೆ **ಆದಾಯ ತೆರಿಗೆ (80ಜಿ)** ವಿನಾಯಿತಿ ಇರುತ್ತದೆ. **ಚೆಕ್ಕಿನ ಹಿಂಭಾಗದಲ್ಲಿ** ದಾನಿಗಳ ಹೆಸರು ಮತ್ತು ವಿಳಾಸ **ಹಾಗೂ ನೆರೆ ಸಂತ್ರಸ್ತರ ನೆರವಿಗಾಗಿ** ಎಂದು ಬರೆಯತಕ್ಕದ್ದು. ಇಂತಹ ಪರಿಸ್ಥಿತಿಯಲ್ಲಿ ಸಂತ್ರಸ್ತರ ಪುನರ್ವಸತಿಗೆ ಉದಾರವಾಗಿ ಧನಸಹಾಯ ಮಾಡುವ ಮೂಲಕ ಅವರ ಸಂಕಷ್ಟದಲ್ಲಿ ಭಾಗಿಗಳಾಗಬೇಕೆಂದು ಕಳಕಳಿಯ ಮನವಿ.

ಶ್ರೀ ಶ್ರೀ ಶಿವಕುಮಾರಮಹಾಸ್ವಾಮಿಗಳು
ಶ್ರೀ ಸಿದ್ಧಗಂಗಾಮಠ, ತುಮಕೂರು

## ೨೦೧೦ನೇ ವರ್ಷದ ಬಸವಾದಿ ಶರಣರ ಸ್ಮರಣೋತ್ಸವಗಳು

| | | |
|---|---|---|
| 1) ಜನವರಿ ೧೪– ಗುರುವಾರ | ಸಂಕ್ರಮಣ | ಸಿದ್ಧರಾಮೇಶ್ವರ |
| 2) ಜನವರಿ ೧೫– ಶುಕ್ರವಾರ | ಅವರಾತ್ರಿ | ಜೇಡರ ದಾಸಿಮಯ್ಯ |
| 3) ಜನವರಿ ೩೦– ಶನಿವಾರ | ಭಾರತ ಹುಣ್ಣಿಮೆ | ಕಿನ್ನರಿ ಬೊಮ್ಮಯ್ಯ |
| 4) ಫೆಬ್ರವರಿ ೧೨– ಶುಕ್ರವಾರ | ಮಹಾಶಿವರಾತ್ರಿ | ಡೋಹರ ಕಕ್ಕಯ್ಯ |
| 5) ಫೆಬ್ರವರಿ ೨೮– ರವಿವಾರ | ಹೋಳಿ ಹುಣ್ಣಿಮೆ | ಬಿಬ್ಬಿ ಬಾಚಯ್ಯ |
| 6) ಮಾರ್ಚ್ ೧೬ – ಮಂಗಳವಾರ | ಯುಗಾದಿ ಪಾಡ್ಯ | ಅಲ್ಲಮಪ್ರಭು |
| 7) ಮಾರ್ಚ್ ೩೦ – ಮಂಗಳವಾರ | ದವನದ ಹುಣ್ಣಿಮೆ | ಅಕ್ಕಮಹಾದೇವಿ |
| 8) ಮೇ ೧೬– ರವಿವಾರ | ಅಕ್ಷಯ ತೃತೀಯ | ಬಸವಣ್ಣನವರು |
| 9) ಜೂನ್ ೧೨ – ಶನಿವಾರ | ಬಾದಾಮಿ ಅಮಾವಾಸ್ಯೆ | ಕುರುಬ ಗೊಲ್ಲಾಳ |
| 10) ಜೂನ್ ೨೬ – ಶನಿವಾರ | ಕಾರ ಹುಣ್ಣಿಮೆ | ಅಂಬಿಗರ ಚೌಡಯ್ಯ |
| 11) ಜುಲೈ ೨೬ – ಸೋಮವಾರ | ಕಡ್ಲಿಗಡಬ ಹುಣ್ಣಿಮೆ | ಹಡಪದ ಅಪ್ಪಣ್ಣ |
| 12) ಆಗಸ್ಟ್ ೧೪– ಶನಿವಾರ | ನಾಗಪಂಚಮಿ | ಅಕ್ಕನಾಗಮ್ಮ |
| 13) ಆಗಸ್ಟ್ ೨೪– ಮಂಗಳವಾರ | ನೂಲಹುಣ್ಣಿಮೆ | ನುಲಿಯ ಚಂದಯ್ಯ |
| 14) ಸೆಪ್ಟೆಂಬರ್ ೧೧– ಶನಿವಾರ | ಗಣೇಶ ಚೌತಿ | ಮಡಿವಾಳ ಮಾಚಿದೇವ |
| 15) ಅಕ್ಟೋಬರ್ ೧೬– ಶನಿವಾರ | ಮಹಾನವಮಿ | ಹರಳಯ್ಯ ಮಧುವಯ್ಯ |
| 16) ಅಕ್ಟೋಬರ್ ೧೭– ಭಾನುವಾರ | ವಿಜಯದಶಮಿ | ಕಲ್ಯಾಣಕ್ರಾಂತಿ ವಿಜಯ |
| 17) ಅಕ್ಟೋಬರ್ ೨೨ – ಶುಕ್ರವಾರ | ಶೀಗೆ ಹುಣ್ಣಿಮೆ | ಗಂಗಾಂಬಿಕೆ |
| 18) ನವೆಂಬರ್ ೭ – ರವಿವಾರ | ದೀಪಾವಳಿ ಪಾಡ್ಯ | ಚೆನ್ನಬಸವಣ್ಣ |
| 19) ನವೆಂಬರ್ ೨೧– ರವಿವಾರ | ಗೌರಿ ಹುಣ್ಣಿಮೆ | ನೀಲಾಂಬಿಕೆ |
| 20) ಡಿಸೆಂಬರ್ ೨೧– ಮಂಗಳವಾರ | ಹೊಸ್ತಿಲ ಹುಣ್ಣಿಮೆ | ಮಾದಾರ ಚೆನ್ನಯ್ಯ |

ವಿಶೇಷ ಸ್ಮರಣೋತ್ಸವಗಳು

| | |
|---|---|
| 21) ಫೆಬ್ರವರಿ ೧೮ – ಗುರುವಾರ | ಶರಣ ಹರ್ಡೇಕರ ಮಂಜಪ್ಪನವರು |
| 22) ಜುಲೈ ೨ – ಶುಕ್ರವಾರ | ಶರಣ ಫ.ಗು. ಹಳಕಟ್ಟಿಯವರು |
| 23) ಅಕ್ಟೋಬರ್ ೨೮ – ಗುರುವಾರ | ಶರಣ ಉತ್ತಂಗಿ ಚೆನ್ನಪ್ಪನವರು |

ಸಂಗ್ರಹ : ಪ್ರೊ. ಸಿದ್ಧಣ್ಣ ಲಂಗೋಟಿ(ಚಾಂದಶವಶಿ)
ಗೌರವ ಸಂಪಾದಕರು, ಬಸವ ಬೆಳಗು ಪತ್ರಿಕೆ
ರಾಮದುರ್ಗ–೫೯೧೧೨೩, ಬೆಳಗಾವಿ ಜಿಲ್ಲೆ.





## ವಿಶ್ವಸಂಸ್ಕೃತಿಗೆ ವೀರಶೈವ ಸಂಸ್ಕೃತಿಯ ಕಾಣಿಕೆ

–ಪ್ರೊ. ಡಿ. ಜವರೇಗೌಡ *

ಜಗತ್ತಿನ ಸಕಲ ದುರಿತ ದಮನ ದೌಷ್ಟ್ಯಗಳಿಗೆ ಖಾಸಗಿ ಆಸ್ತಿಯೆ ಮೂಲವಾದದ್ದರಿಂದ, ವ್ಯಕ್ತಿಗಳು ಸಂಪಾದಿಸಿದ ಗಳಿಕೆ ಸಂಘದಲ್ಲಿ ವಿಲಯನಗೊಳ್ಳತಕ್ಕದ್ದೆಂದು ಬುದ್ಧ ನಿಯಮ ಗೊಳಿಸಿದ. ದೊರೆ, ಪ್ರಜೆ, ಅಧಿಕಾರಿ ನೌಕರ, ಗುರು ಶಿಷ್ಯ, ತಂದೆ ಮಗ, ಯಜಮಾನ ಆಳು ಎಲ್ಲರೂ ಸರ್ಕಾರದಲ್ಲಾಗಲಿ, ಹೊಲ ಮನೆಗಳಲ್ಲಾಗಲಿ, ಕಾರ್ಖಾನೆಗಳಲ್ಲಾಗಲಿ, ಏಕಪ್ರಕಾರವಾಗಿ ದುಡಿಯುವಂತಾದಾಗ ವರ್ಗಭೇದ ಸಂಘರ್ಷಗಳು ತಾವಾಗಿಯೇ ಅಳಿದುಹೋಗುತ್ತವೆಂಬ ಸತ್ಯ ಕಾಯಕದ ಹಿನ್ನಲೆಯಲ್ಲಿದೆ ಎಂಬುದನ್ನು ಮರೆಯುವಂತಿಲ್ಲ. ಬಡವ ತನ್ನ ಕುಟುಂಬದೊಡನೆ ಬೆಳಗಿನಿಂದ ಸಂಜೆಯವರೆಗೆ ದುಡಿದು ಬೆವರು ಸುರಿಸಿ ಉತ್ಪತ್ತಿ ತೆಗೆಯುತ್ತಾನೆ; ಆದರೆ ಅವನ ಕುಟುಂಬಕ್ಕೆ ಒಂದು ಹೊತ್ತು ಅಂಬಲಿಗೂ ಗತಿಯಿಲ್ಲ, ಮಾನ ಮುಚ್ಚಲು ಬಟ್ಟೆಯಿಲ್ಲ, ಅವನ ಮಕ್ಕಳಿಗೆ ಒಳಲೆ ಹಾಲು ಸಿಗುವುದಿಲ್ಲ; ದುಡಿಯದೆ ಬೆವರದೆ ನೆಳಲಿನಲ್ಲಿ ಕುಳಿತಿದ್ದವ ಬಡವ ಬೆಳೆದದ್ದನ್ನೆಲ್ಲ ಲಪಟಾಯಿಸಿಕೊಳ್ಳುತ್ತಾನೆ; ಅದರಿಂದ ಅದ್ದೂರಿಯ ಜೀವನ ನಡೆಸುತ್ತಾನೆ; ಮನೆ ಮಂದಿಯೆಲ್ಲಾ ಮೃಷ್ಟಾನ್ನ ತಿಂದು ತೇಗುತ್ತಾರೆ. ಇದು ನಿಸರ್ಗನಿಮಯಕ್ಕನುಗುಣವಾಗಿದೆಯೆ? ವಿಚಾರ ವಿವೇಕಗಳಿಗೊಪ್ಪುತ್ತದೆಯೆ? **'ಉಣ್ಣುವ ಹಕ್ಕು ದುಡಿಯದವನಿಗಿಲ್ಲ'** ಎಂದು ಯೇಸು ಹೇಳಲಿಲ್ಲವೆ? **'ಕುರ್ವನ್ನೇವೇಹ ಕರ್ಮಾಣಿ ಜಿಜೀವಿಶೇಚ್ಛತಂ ಸಮಾಃ'** ಎಂಬುದಾಗಿ ಭರತಖಂಡದ ಆರ್ಷೇಯರೂ ಹೇಳಿದ್ದುಂಟು.

ಆಸರೆ ಕೊಡುವ ಮನೆಯನ್ನು ಹಸನಾಗಿಟ್ಟುಕೊಳ್ಳಬೇಕಾದ್ದು ಆಸರೆಯನ್ನನುಭವಿಸುವ ಧರ್ಮ. ಅಂತೆಯೇ ತನ್ನನ್ನು ಸಾಕುವ ನಿಸರ್ಗವನ್ನು ಹಿಂಸಿಸದೆ, ಹಾಳುಗೆಡವದೆ, ಅತಿಕ್ರಮಿಸದೆ ಸುರಕ್ಷಿತವಾಗಿಟ್ಟುಕೊಳ್ಳಬೇಕಾದ್ದು ಮಾನವನ ನೈತಿಕ ಕರ್ತವ್ಯ. ತನ್ನ ಬದುಕಿಗೆ ನೆರವಾಗುವ ಸಮಾಜಕ್ಕೆ ತನ್ನನ್ನೇ ಸಮರ್ಪಿಸಿಕೊಳ್ಳಬೇಕಾದ್ದು ಕೃತಜ್ಞನ ಲಕ್ಷಣ. ಕಾಯಕ ದಾಸೋಹಗಳು ಮಾನವನ ಸಕಲ ಅಗತ್ಯಗಳನ್ನು ಮಾತ್ರವಲ್ಲ, ಅವನ ಋಣ ಹೊಣೆಗಾರಿಕೆಗಳನ್ನು ಸಹ ಪೂರೈಸುತ್ತವೆ. ಉತ್ಪತ್ತಿ ಸಾಧನಗಳಲ್ಲಿ ಮನುಷ್ಯನ ಶ್ರಮವೂ ಒಂದು; ಅದು ಒಂದೇ ಹೊರತು ಸರ್ವಸ್ವವಲ್ಲ. **'ಇಳೆ ನಿಮ್ಮ ದಾನ, ಬೆಳೆ ನಿಮ್ಮ ದಾನ, ಸುಳಿದು ಬೀಸುವ ವಾಯು ನಿಮ್ಮ ದಾನ, ಎತ್ತು ನಿಮ್ಮ ದಾನ, ಬಿತ್ತು ನಿಮ್ಮ ದಾನ, ಸುತ್ತಿ ಹರಿವ ಸಾಗರವೆಲ್ಲ ನಿಮ್ಮ ದಾನ, ಕಾಯ ನಿಮ್ಮ ದಾನ, ಜೀವ ನಿಮ್ಮ ದಾನ'**–ಎನ್ನುವ ದೇವರ ದಾಸಿಮಯ್ಯನ ಮಾತು ಪೂರ್ಣ ಸತ್ಯ. ಕಾಯವೂ ಭಗವಂತನ ದಾನವಾಗುವುದಾದರೆ, ಮನುಷ್ಯನದ್ದಾಗಿ ಏನುಳಿದಿದೆ? ಶ್ರಮ ಸಹ ಮನುಷ್ಯನ ಕಾಯದಿಂದ ಬಂದದ್ದಲ್ಲವೆ? ಅಂದ ಮೇಲೆ, ಕಾಯಕದ ಪ್ರತಿಫಲ ಸ್ವಯಾರ್ಜಿತವಲ್ಲವೆಂದೇ ಹೇಳಬೇಕು; ಅದು ರಾಷ್ಟ್ರದ ಸ್ವತ್ತು. ಅಂದಂದಿಗೆ ಬೇಕಾದಷ್ಟನ್ನು ಉಳಿಸಿಕೊಂಡು, ಹೆಚ್ಚಿನದನ್ನು ಸಮಾಜಕ್ಕೆ ಹಿಂದಿರುಗಿಸಲೇಬೇಕು.

ಬುದ್ಧನಂತೆ ಬಸವಣ್ಣನವರು ಬಡತನವನ್ನು ಪುರಸ್ಕರಿಸುವುದಿಲ್ಲ, ಸಿರಿತನವನ್ನು ಕೊಂಡಾಡುವುದಿಲ್ಲ. ಅವರು ಜೀವನ ಪ್ರೇಮವನ್ನು ಪ್ರೋತ್ಸಾಹಿಸಿದರೆ ಹೊರತು, ಜೀವನವಿಮುಖತೆಯನ್ನಾಗಲಿ ಜೀವದಂಡನೆಯನ್ನಾಗಲಿ ಉತ್ತೇಜಿಸುವುದಿಲ್ಲ. ಆಶೆಗೆ ಮಿತಿಯಿಲ್ಲ, ಅದಕ್ಕೆ ಆಕಾಶವೆ ಗಡಿ. ಹಾಗಾದಾಗ ಮನುಷ್ಯನಿಗೆ ತೃಪ್ತಿ ದೊರೆಕೊಳ್ಳುವುದಿಲ್ಲ. ಇದ್ದದ್ದರಲ್ಲಿಯೇ ತೃಪ್ತಿ ಸಿಗದಿದ್ದಾಗ, ಅತೃಪ್ತಿ ಅಸಮಧಾನಗಳಲ್ಲಿಯೇ ಬದುಕನ್ನು ಕೊನೆಗಣಿಸಬೇಕಾಗುತ್ತದೆ. ಅದರಿಂದ ಜೀವನ ಶ್ರದ್ಧೆ ಕುಸಿಯುತ್ತದೆ. **ಉಣ್ಣಲು ಮುದ್ದೆ, ಹೊದೆಯಲು ಕವುದಿ, ಒರಗಲು ಚಾಪೆ, ನಿಲ್ಲಲು ನೆರಳು ಮನುಷ್ಯನಿಗೆ ಅತ್ಯಗತ್ಯ. ಅನುಕೂಲವಿದ್ದಲ್ಲಿ ಹಾಲನೇಮ, ಹಾಲಕೆನೆಯ ನೇಮ, ಬೆಲ್ಲದ ನೇಮ, ಬೆಣ್ಣೆಯ ನೇಮವೂ ಇರಲಿ, ಆದರೆ 'ಇಲ್ಲದುದ ಕಡವ ಮಾಡದಿಪ್ಪದೇ ನೇಮ'**

* ಮಾಜಿ ಉಪ ಕುಲಪತಿಗಳು, ಮೈಸೂರು ವಿಶ್ವವಿದ್ಯಾಲಯ, ಮೈಸೂರು.

ಎಂಬ ಬಸವಣ್ಣನವರ ಬುದ್ಧಿಯ ಮಾತನ್ನು ಕೇಳಿದರೆ ಮನುಷ್ಯನಿಗೆ ಸಂತೃಪ್ತಿ, ಸಂಯಮ, ಆನಂದಗಳೊದಗುವುದರಲ್ಲಿ ಸಂದೇಹವಿಲ್ಲ. ಮನಸ್ಸಿನ ನಿರಾಳಕ್ಕೆ ಲೌಕಿಕ ಸಂಪತ್ತು ಕಾರಣವಾಗಲಾರದೆಂಬುದೂ ನಿಜ.

ಆದ್ದರಿಂದ ಯಾವ ಪ್ರಕಾರದ, ಯಾವ ಕಾಲ ಪ್ರಮಾಣದ ಸಂಗ್ರಹವೇ ಆಗಲಿ ದೂಷ್ಯವೆಂದು ವಚನಕಾರರ ಆದೇಶವಿದೆ. ನರದೇಹವೇ ನಶ್ವರವಾಗಿರುವಾಗ ಧನವನ್ನು ಉಳಿಸಿ ಹೂತುಹಾಕಿ ಪ್ರಯೋಜನವೇನು?

*ಆಯುಷ್ಯವುಂಟು, ಪ್ರಳಯವಿಲ್ಲೆಂದು ಅರ್ಥವ*
*ಮಡುಗುವಿರಿ;*
*ಆಯುಷ್ಯವು ತೀರಿ ಪ್ರಳಯವು ಬಂದರೆ ಅರ್ಥವ*
*ನುಂಬವರಿಲ್ಲಾ,*
*ನೆಲನನಗಿದು ಮಡುಗದಿರಾ! ನೆಲ*
*ನುಂಗಿದೊಡುಗುಳುವುದೆ ?*
*ಕಣ್ಣಿನಲ್ಲಿ ನೋಡಿ, ಮಣ್ಣಿನಲ್ಲಿ ನೆರಹಿ, ಉಣ್ಣದೆ*
*ಹೋಗದಿರಾ!*
*ನಿನ್ನ ಮಡದಿಗಿರಲೆಂದಡೆ ಮಡದಿಯ ಕೃತಕ ಬೇರೆ*
*ನಿನ್ನೊಡಲು ಕೆಡೆಯಲು ಮತ್ತೊಬ್ಬನಲ್ಲಿ ಗಡಕದೆ*
*ಮಾಣ್ಬಳೆ ?*
*ಹೆರರಿಗಿಕ್ಕಿ ಹೆಗ್ಗುರಿಯಾಗಿ ಕೆಡಬೇಡ !*
*ಕೂಡಲಸಂಗನ ಶರಣರಿಗೊಡನೆ ಸವೆಸುವುದು.*

ಬಸವಣ್ಣನವರ ಗಂಡಸಿನ ಪರವಾದ ಮಾತು ಮಡದಿಗೂ ಸಲ್ಲುತ್ತದೆ. ಶ್ರೀಮಂತ ದರಿದ್ರರ ನಡುವಣ ಅಂತರವೆ ನರನರರ ನಡುವಣ, ದೇಶದೇಶಗಳ ನಡುವಣ ದ್ವೇಷಮಾತ್ಸರ್ಯಗಳಿಗೆ, ಚೌರ್ಯ ದೌರ್ಜನ್ಯಗಳಿಗೆ ಕಷ್ಟ ಕ್ರೌರ್ಯಗಳಿಗೆ ಕಾರಣವೆಂಬುದು ಜಗತ್ಪ್ರಸಿದ್ಧ ಸಂಗತಿ. ಕಳ್ಳ ಶ್ರೀಮಂತನ ಮನೆಗೆ ಲಗ್ಗೆ ಹಾಕುವಂತೆ ಬಡವನ ಗುಡಿಸಿಲು ಕಡೆಗೆ ತಿರುಗಿ ನೋಡುವುದಾದರೂ ಉಂಟೆ? **'ಕಳ್ಳನ ಮನೆಗೊಬ್ಬ ಬಲುಗಳ್ಳ ಬಂದಡೆ ಕೂಡಲ ಸಂಗಮದೇವನಲ್ಲದೆ ಆರೂ ಇಲ್ಲಾ; ಅಯ್ಯೋ ನಮ್ಮಯ್ಯನ ಕೈ ನೊಂದಿತು'** ಎನ್ನುವ ಬಸವಣ್ಣನವರ ಮಾತಿನಲ್ಲಿ ಚೌರ್ಯದ ಮೀಮಾಂಸೆಯೇ ಅಡಕಗೊಂಡಿದೆ. **'ಒಡೆಯ ರೊಡವೆಯ ಕೊಂಡಡೆ ಕಳ್ಳಂಗಳ–ಲಾಯಿತ್ತೆಂಬ ಗಾದೆ ಎನಗಾಯಿತ್ತಯ್ಯ'** ಎಂಬಲ್ಲಿಯ ಕಳ್ಳ ಯಾರು? ಯಾವನು ಹಣವನ್ನು ಅವಿಚಿಟ್ಟಿದ್ದನೋ ಅವನೇ ಕಳ್ಳ; ಅವಿಚ್ಚಿಟ್ಟಿದ್ದು ರಾಷ್ಟ್ರದ, ಭಗವಂತನ, 'ಒಡೆಯನ' ಒಡವೆ ಯಲ್ಲವೆ? ಹಾಗೆ ಬಚ್ಚಿಟ್ಟವನೆ ಕಳ್ಳನಲ್ಲವೆ?

ಕ್ರಿಯೆಯಿಂದಲ್ಲದೆ ಜಗತ್ತು ಒಂದು ನಿಮಿಷವೂ ಮುಂದೆ ಚಲಿಸುವುದಿಲ್ಲ. ಜೀವ ಜಂತುಗಳ ಸಕಲ ವ್ಯಾಪಾರಗಳು ಜರುಗುವುದಿಲ್ಲ. ಗಾಳಿ ಬೀಸಬೇಕು, ನೀರು ಹರಿಯಬೇಕು, ಬಿಸಿಲು ಸುಡಬೇಕು, ತಿರೆ ತಿರುಗಬೇಕು. ಇವೆಲ್ಲವೂ ನಿಸರ್ಗ ಸಹಜಕ್ರಿಯೆಗಳು. ಮಾನವನ ದೇಹದಲ್ಲಿಯೇ ಅವನು ಮಲಗಿರುವ್ವಾಗಲು ಸಹ ಪ್ರತಿ ಸೆಕೆಂಡೂ ಅದೆಂಥ ಅದ್ಭುತ ಕ್ರಿಯೆಗಳು ನಡೆಯುತ್ತವೆಂಬುದು ಸಾಮಾನ್ಯಮತಿಗೆ ದಿಗ್ಭ್ರಮೆಯಾಗುವ ಸಂಗತಿ. ಅವುಗಳಲ್ಲಿ ಒಂದು ಕ್ರಿಯೆ ನಿಂತರೂ ದೇಹ ಅಸ್ವಸ್ಥಗೊಳ್ಳುತ್ತದೆ. ಅಂದ ಮೇಲೆ ಕ್ರಿಯೆಯೇ ಸಮಸ್ತ ವಿಶ್ವದ ಚೇತನ. ಸಮುದ್ರಮಂಥನ ಪ್ರಸಂಗವೇ ವಿಶ್ವ ಘಟನೆಗಳಿಗೊಂದು ಮಹಾಪ್ರತಿಮೆಯಾಗಿದೆ. ಕ್ರಿಯಾಮಥನವಿಲ್ಲದೆ ಕಬ್ಬಿನ ಹಾಲು ದೊರೆಯದು, ಎಣ್ಣೆ ಕೈಸೇರದು, ಘೃತವೊದಗದು, ಅಗ್ನಿ ಸಂಭವಿಸದು. **'ಇದು ಕಾರಣ, ನಮ್ಮ ಗೊಹೇಶ್ವರ ಲಿಂಗವ ತನ್ನೊಳರಿದೆನೆಂಬ ಮಹಂತಂಗಲ್ಲದೆ, ಸತ್ಕ್ರಿಯಾಚರಣೆಯೇ ಸಾಧನ ಕಾಣ ಭೋ'** ಎಂದು ಅಲ್ಲಮಪ್ರಭು ಕ್ರಿಯೆಯ ಮಹತ್ವವನ್ನು ಎತ್ತಿ ಹಿಡಿದಿದ್ದಾರೆ. ಓದೊಕ್ಕಾಲು ಬುದ್ಧಿಮುಕ್ಕಾಲು ಎಂಬೊಂದು ಗಾದೆಯುಂಟು. ಜ್ಞಾನ ಸಂಪಾದನೆಯಲ್ಲಿ ಓದಿಗಿಂತ ಬುದ್ಧಿಯ ಪಾತ್ರವೇ ಅಧಿಕ; ಬುದ್ಧಿಗಿಂತಲೂ ಕ್ರಿಯೆ ಪ್ರಯೋಗಗಳ ಪಾತ್ರ ಒಂದು ಕೈಮಿಗಿಲೆಂದೇ ಹೇಳಬೇಕು. ಗಂಡಭೇರುಂಡಗಳಂತೆ ಜ್ಞಾನ ಕ್ರಿಯೆಗಳು ಒಂದೇ ಶಕ್ತಿಯ ಎರಡು ಮುಖಗಳು; ಪರಸ್ಪರಾವಲಂಬಿಗಳು; ಒಂದು ಬಿಟ್ಟು ಮತ್ತೊಂದಿರಲಾರದು. 'ಜ್ಞಾನದಲರಿದಡೇನಯ್ಯ, ಕ್ರೀಯನಾಚರಿಸದನ್ನಕ್ಕ? ನೆನೆದ ಮಾತ್ರದಲ್ಲಿ ಅಹುದೆ, ಕಾರ್ಯದಲಲ್ಲದೆ? ಕುರುಡ ಕಾಣಪಥವ, ಹೆಳವ ನಡೆಯಲರಿಯ, ಒಂದಿಲ್ಲದಿರ್ದಡೊಂಡಾಗದು. ಜ್ಞಾನವಿಲ್ಲದಿರ್ದ ಕ್ರೀಜಡನು. ಕ್ರೀಯಿಲ್ಲದ ಜ್ಞಾನ ವಾಗ್‌ಜಾಲ, ಭ್ರಾಂತು. ಇದು ಕಾರಣ ಸಿದ್ಧ ಸೋಮನಾಥ ಲಿಂಗವ ಕೂಡುವ ಶರಣಂಗೆ ಎರಡೂ





ಬೇಕು' ಎಂಬ ಅಮುಗಿ ದೇವಯ್ಯನ ವಚನದಲ್ಲಿ ಆಧ್ಯಾತ್ಮ ದರ್ಶನದ ಜೊತೆಗೆ, ಶೈಕ್ಷಣಿಕ ಮನೋವಿಜ್ಞಾನದ ಹೊಳಹು ಕೂಡ ಚೆಲ್ಲುತ್ತದೆ.

ಕ್ರೀಜ್ಞಾನಗಳು ಒಂದೇ ಹಕ್ಕಿಯ ರೆಕ್ಕೆಗಳೆಂದೂ, ರೆಕ್ಕೆಗಳಿದ್ದರೆ ಮಾತ್ರ ಹಕ್ಕಿ ಗಗನಕ್ಕೆ ಹಾರುತ್ತದೆಂದೂ ಷಣ್ಮುಖ ಸ್ವಾಮಿಗಳು ಅವೆರಡರ ಸಮ ಪ್ರಾಮುಖ್ಯವನ್ನು ಎತ್ತಿ ತೋರಿಸುತ್ತಾರೆ.

*ಆವುದಾನೊಂದು ಪಕ್ಷಿ ಉಭಯರೆಕ್ಕೆಯಿಂದ ಗಗನಕ್ಕೆ*
*ಹಾರುವಂತೆ.*
*ಅಂತರಂಗದಲ್ಲಿ ಸಮ್ಯಗ್‌ಜ್ಞಾನ ಬಹಿರಂಗದಲ್ಲಿ*
*ಶಿವಸತ್‌ಕ್ರಿಯಾ*
*ಸನ್ನಿಹಿತವಿಲ್ಲದೆ ಪರವಸ್ತುವ ಕೂಡಬಾರದಾಗಿ*
*ಇದು ಕಾರಣ ಸತ್‌ಕ್ರಿಯಾ ಸಮ್ಯಗ್‌ಜ್ಞಾನಸಂಪನ್ನರಾದ*
*ಮಹಾಶರಣರ*
*ತೋರಿ ಬದುಕಿಸಯ್ಯಾ ಎನ್ನ ಅಖಂಡೇಶ್ವರಾ*

ಕಣ್ಣು ಕಾಲು ಎರಡುಳ್ಳವ ಮಾತ್ರ ಎಂತು ದೂರ ಹೋಗಬಲ್ಲನೋ ಅಂತೆಯೇ 'ನಿಜಗುರು ಸ್ವತಂತ್ರ ಸಿದ್ಧಲಿಂಗೇಶ್ವರನ ನಿಜವ ಬೆರಸುವೊಡೆ ಜ್ಞಾನವೂ ಕ್ರಿಯೆಯೂ ಎರಡೂ ಬೇಕು' ಎಂಬುದಾಗಿ ಸ್ವತಂತ್ರ ಸಿದ್ಧಲಿಂಗೇಶ್ವರರು ನುಡಿಯುತ್ತಾರೆ. ಸ್ವತಂತ್ರ ಸಿದ್ಧಲಿಂಗೇಶ್ವರರ ಸಾಕ್ಷಾತ್ಕಾರ ಲಭಿಸಬೇಕಾದರೆ ಅವೆರಡೂ ಬೇಕೆಂಬ ಮಾತಿನ ಒತ್ತನ್ನು ಗಮನಿಸಬೇಕು. 'ಕ್ರಿಯೆಯನರಿದವಂಗೆ ಗುರುವಿಲ್ಲ, ಆಚಾರವನರಿದವಂಗೆ ಲಿಂಗವಿಲ್ಲ' ಎಂಬ ಅಂಬಿಗರ ಚೌಡಯ್ಯನ ಅನುಭವದ ವಾಣಿ ಸಕಲ ಕಾಲಕ್ಕೂ ಪ್ರಸ್ತುತ.

ನಿಜದ ನೆಲೆಯರಿಯಲು ಕ್ರಿಯೆ ಅನಿವಾರ್ಯವಾದ್ದರಿಂದ ಅದು ಶುದ್ಧಿಯಾಗಿರಬೇಕೆಂಬ ತುರುಗಾಹಿ ರಾಮಣ್ಣನಂಥ ಶರಣರ ಹೇಳಿಕೆಯನ್ನು ಗಮನಿಸಿದಾಗ, ಗುರಿಯಂತೆ ಮಾರ್ಗವೂ ಮುಖ್ಯವೆಂಬ ಗಾಂಧೀಜಿಯ ಮಾತು ನೆನಪಾಗುತ್ತದೆ. ರಾಮಣ್ಣನ ಸತ್ಯವಾಕ್ಯ ಎಷ್ಟು ಪ್ರಾಚೀನವೋ ಅಷ್ಟೇ ಆರ್ವಾಚೀನವೂ ಹೌದು.

*ಕ್ರೀ ಶುದ್ಧತೆಯಾದಲ್ಲಿ ಭಾವ ಶುದ್ಧವಾಗಿಪ್ಪುದು*
*ಭಾವ ಶುದ್ಧವಾಗಿಪ್ಪಲ್ಲಿ ಸರ್ವೇಂದ್ರಿಯಂಗಳು*
*ಏಕೇಂದ್ರಿಯವಾಗಿ ಚಿತ್ತ ಶುದ್ಧವಾಗಿಪ್ಪುದು*
*ಚಿತ್ತ ಶುದ್ಧಿ ಸಿದ್ಧಿಯಾದಲ್ಲಿ ಸರ್ವಜ್ಞಾನ ಸಂಪನ್ನನಪ್ಪನು*
*ಆ ಗುಣ ನಿಜನೆಲೆಯಾದಲ್ಲಿ*
*ಗೋಪತಿನಾಥ ವಿಶ್ವೇಶ್ವರ ಲಿಂಗವು ಬೆಚ್ಚಂತಿಪ್ಪನು*

ಕ್ರೀಜ್ಞಾನ ಭಾವಗಳ ತ್ರಿವೇಣೀ ಸಂಗಮ ಹಾಗೂ ಶುದ್ಧಿ ಸಿದ್ಧಿಯೇ ಕಾಯಕ. ಮಾನಸಿಕ ದೈಹಿಕ ಆರೋಗ್ಯಕ್ಕೂ ಕಾಯಕವೇ ದಿವ್ಯ ಭೇಷಜ. ವ್ಯಕ್ತಿ ಸ್ವಾತಂತ್ರ್ಯವನ್ನೊಳಗೊಂಡ ಎಲ್ಲ ಸ್ವಾತಂತ್ರ್ಯಕ್ಕೂ ಅದೇ ಮೂಲ. ಅದರ ಅರ್ಥವನ್ನು ಕುರಿತು ಧ್ಯಾನಿಸಿದಂತೆಲ್ಲ, ಪರಿಭಾವಿಸಿದಂತೆಲ್ಲ ವಿಸ್ತಾರವಾಗುತ್ತದೆ. ಅಸೀಮವಾಗುತ್ತದೆ, ಬುದ್ಧಿ ಮುಗ್ಗರಿಸುವಂತಾಗುತ್ತದೆ. ಆಧುನಿಕ ಅರ್ಥಶಾಸ್ತ್ರ ತತ್ತರಿಸುವಂತಾಗುತ್ತದೆ. ಆ ಸಿದ್ಧಾಂತವನ್ನು ಊಹಿಸಿ, ರೂಪಿಸಿ, ವಿಶ್ವಚೈತನ್ಯವನ್ನು ತುಂಬಿದ ವಚನಕಾರರ ಲೋಕಕಲ್ಯಾಣಕರ ಪ್ರಖರ ಪರಿಣಾಮಕಾರೀ ಚಿಂತನೆ ಆಧುನಿಕರಿಗೂ ಅಚ್ಚರಿಯುಂಟುಮಾಡದಿರಲಾರದು.

## ಸೋಮೇಶ್ವರ ಶತಕ

*ಮದನಂ ದೇಹದ ನೀಗಿದಂ ನೃಪವರಂ*
*ಚಂಡಾಲಗಾಳಾದ ಪೋ ।*
*ದುದು ಬೊಮ್ಮಂಗೆ ಶಿರಸ್ಸು ಭಾರ್ಗವನು*
*ಕಣ್ಣಾಗಣಂ ನಳಂ ವಾಜಿಪಂ ॥*
*ಸುಧೆಯಂ ಕೊಟ್ಟು ಸುರೇಂದ್ರ ಸೋಲ್ತ*
*ಸತಿಯಂ ಪೋಗಾಡಿದಂ ರಾಘವಂ ।*
*ವಿಧಿಯಂ ಮೀರುವನಾವನ್ನೈ*
*ಹರಹರಾ ಶ್ರೀ ಚೆನ್ನಸೋಮೇಶ್ವರಾ ॥*

ಮನ್ಮಥನು ದೇಹವನ್ನೇ ಕಳೆದುಕೊಂಡನು. ರಾಜಶ್ರೇಷ್ಠನಾದ ಹರಿಶ್ಚಂದ್ರನು ಚಂಡಾಲನಿಗೆ ದಾಸನಾದನು. ಬ್ರಹ್ಮನಿಗೆ ಒಂದು ತಲೆಯೇ ಹೋಯಿತು. ಶುಕ್ರಾಚಾರ್ಯನಿಗೆ ಒಂದು ಕಣ್ಣು ಹೋಯಿತು. ನಳನು ಕುದುರೆಯ ಕಾಸ್ತಾರನಾದನು. ಇಂದ್ರನು ಅಮೃತವನ್ನು ಕಳೆದುಕೊಂಡು ಯುದ್ಧದಲ್ಲಿ ಸೋತುಹೋದನು. ಶ್ರೀರಾಮನು ತನ್ನ ಹೆಂಡತಿಯನ್ನು ಕಳೆದುಕೊಂಡನು ; ಹೀಗಿರುವಾಗ ಲೋಕದಲ್ಲಿ ಅದೃಷ್ಟವನ್ನು ಮೀರಲು ಯಾರು ತಾನೇ ಸಮರ್ಥರು?

# 'ಶಿವಯೋಗಿ ಸಿದ್ಧರಾಮ'

-ಯು.ಎಸ್. ಸಂಗನಾಳಮಠ *

***'ಕಾಯದೊಳು ಕರಣವಿಲ್ಲ ಪ್ರಾಣದೊಳಗೆ ಭಾವವಿಲ್ಲ***
***ಭಾವದೊಳಗೆ ಭ್ರಮೆಯಿಲ್ಲ***
***ನವನಾಳದೊಳಗೆ ಸುಳುಹು ಮುನ್ನಿಲ್ಲ***
***ಬ್ರಹ್ಮರಂಧ್ರದಲ್ಲಿ ಅರಿವರಿತ ಮಹಾಶಿವಯೋಗಿ***
***ಗುಹೇಶ್ವರ ಶರಣ ಸಿದ್ಧರಾಮಯ್ಯ***
***ನಿನ್ನ ಕಂಡೆನ್ನ ಬವ ನಾಸ್ತಿಯಾಯಿತು ಕೇಳಾ'***



ಸೊನ್ನಲಾಪುರದ ಸೊನ್ನಲಿಗೆಯ ಮುಪ್ಪಿನ ಮುದ್ದಯ್ಯ-ಸುಗ್ಗತಿಯರ ಮಗ ಧೂಳಿಮಾಕಾಳ ದನಗಾಹಿಯಾಗಿ ಬೆಳೆದು ರೇವಣಸಿದ್ಧರಿಂದ 'ಸಿದ್ಧರಾಮ'ನಾಗಿ, ಮಲ್ಲಯ್ಯನನ್ನು ಅರಸುತ್ತ ಶ್ರೀಶೈಲದ ಕಮರಿಗೆ ಬಂದು ಶಿವನನ್ನು ಕಾಣದೇ ಅದರಲ್ಲಿ ಹಾರಿ, ಮಲ್ಲಯ್ಯನನ್ನು ಸಾಕ್ಷಾತ್ಕರಿಸಿಕೊಂಡು ಮರಳಿ ಸೊನ್ನಲಿಗೆಗೆ ಬಂದು ಜನಹಿತ ಕಾರ್ಯಗಳಲ್ಲಿ ತೊಡಗಿದನು. ದೇವಾಲಯಗಳ ನಿರ್ಮಾಣ ಕೆರೆ-ಬಾವಿಗಳ ನಿರ್ಮಾಣ, ಬಡವರ ಮದುವೆ ಮಾಡಿಸುವುದು, ದುಃಖಿತರ ಅರ್ತಿನಾಶನ, ಅನ್ನಸಂತರ್ಪಣೆ, ಜ್ಞಾನದಾನ ಇವೇ ಕಾರ್ಯಗಳು. ಸಿದ್ಧರಾಮ ಶ್ರೀಶೈಲದ ಪ್ರತಿರೂಪವನ್ನೇ ಸೊನ್ನಲಾಪುರದಲ್ಲಿ ಮಾಡಿದರು.

ಒಂದು ತರ್ಕದ ಪ್ರಕಾರ ಬಸವಣ್ಣನವರೇ ಸಿದ್ಧರಾಮನ ಕೀರ್ತಿ ಕೇಳಿ ರಾಜಕಾರಣ ಕಾರ್ಯದ ಜೊತೆ ಸ್ವಕಾರ್ಯ ಹಮ್ಮಿಕೊಂಡು ಸೊನ್ನಲಿಗೆಗೆ ಬಂದಿರಬೇಕು. ಸಿದ್ಧರಾಮಯ್ಯ ಈ ವಚನದಲ್ಲಿ ಅಂದು ಬಸವಣ್ಣ ಬಂದು ಜರಿಯ ಹೋಯದ ಮರಿದನೆ ಆ ನೋವ ಜರಿದುದು ಎನಗೆ ದೀಕ್ಷೆಯಾಯಿತು, ಆ ದೀಕ್ಷೆಯ ಗುಣದಿಂದ ಫಲಪದಕೆ ದೂರನಾದೆ। ಆ ಬಸವಣ್ಣನೇ ಎನ್ನ ಪರಮಾರಾಧ್ಯ' ಎಂದಿದ್ದಾನೆ. ಮುಂದೆ ಬಸವಣ್ಣನವರೇ ಸಿದ್ಧರಾಮನ ಅಂತರಂಗ ಬಹಿರಂಗ ಶುದ್ಧಿಗೆ ಕಾರಣರಾಗುತ್ತಾರೆ.

ಸಿದ್ಧರಾಮನಿಗೆ ತಾನು ಮಾಡುವುದು ನಶ್ವರ; ಫಲಪ್ರದವಾಗದು ಎಂದು ಚಿಂತಿಸಿ, ಐಹಿಕ ಕೀರ್ತಿಯ ಬಗ್ಗೆ ಅರಿಷಡ್ವರ್ಗಗಳಿಗೆ ಜಿಗುಪ್ಸೆ ಹೊಂದಿ ಗುರುಕಾರುಣ್ಯ ಹೊಂದಲು ಮನಸ್ಸು ಪರಿಪಕ್ವವಾಗುವುದು ಎಂದೆನಿಸುವುದು. ಆಗ ಅಲ್ಲಮ ಪ್ರಭುಗಳು ಸೊನ್ನಲಿಗೆಗೆ ಬರುತ್ತಾರೆ. ಪ್ರಭುದೇವರು ಮೊದಲು ಸೊನ್ನಲಾಪುರದ ಹತ್ತಿರ ಪುಳಜೆಯಲ್ಲಿದ್ದ ಅಮುಗಿ ದೇವಯ್ಯನನ್ನು ಕಂಡು ನಂತರ ಸಿದ್ಧರಾಮನ ಹತ್ತಿರ ಬಂದರು. ಅಮುಗಿ ದೇವಯ್ಯ ತನ್ನ ನೇಯ್ಗೆ ಕಾಯಕದಿಂದ ಜಂಗಮ ದಾಸೋಹವನ್ನು ನಡೆಸಿ ಪ್ರಸಿದ್ಧನಾಗಿದ್ದನು. ಸಿದ್ಧರಾಮ ಕೃತಜ್ಞತೆಯಿಂದ ತನ್ನ ವಚನ ಒಂದರಲ್ಲಿ 'ನಿಷ್ಠಾ ಮಹೇಶ್ವರನೆನಿಪ ಅಮುಗಿ ದೇವಯ್ಯಗಳಿಂದ ಪ್ರಭುದೇವರ ಕಂಡೆನಯ್ಯಾ!' ಎಂದಿದ್ದಾರೆ ತಮ್ಮ ಒಂದು ವಚನದಲ್ಲಿ

***'ಅಂಗಲಿಂಗವೆಂದಂದ ಬಳಿಕ ಅಂಗ ಕೆಟ್ಟು***
***ಲಿಂಗ ಉಳಿಯಿತ್ತು ನೋಡಾ***
***ಅಂಗ ನಿರ್ವಯಲಾದಲ್ಲಿ ಲಿಂಗ ಭವಿಯಾದುದು***
***ನೋಡಾ***
***ಅಂಗ ಲಿಂಗ ನಿರ್ವಯಲಲ್ಲಡಗಿಸಬಲ್ಲಡೆ***
***ಭಕ್ತನೆಂಬೆ ಮಹೇಶನೆಂಬೆ***
***ಕಪಿಲಸಿದ್ಧಮಲ್ಲಿಕಾರ್ಜುನನೆಂಬೆ ನೋಡಾ!***
***ಅಮುಗಿದೇವ'***

* ಉಪನ್ಯಾಸಕರು, 'ಜ್ಯೋತಿರ್ಲಿಂಗ', ಶಿವಮೊಗ್ಗ ರಸ್ತೆ, ಒಂದನೇ ಒಳತಿರುವು,
ಹೈಸ್ಕೂಲ್ ಬಡಾವಣೆ, ಹೊನ್ನಾಳಿ- ದಾವಣಗೆರೆ ಜಿಲ್ಲೆ.





ಈ ವಚನದಲ್ಲಿ ಬರುವ ಆಧ್ಯಾತ್ಮದ ಅನುಭಾವದ ಆಳವನ್ನು ವಿವೇಚಿಸಬಹುದು. ಮುಂದೆ ಸಿದ್ಧರಾಮ ಕಲ್ಯಾಣದಲ್ಲಿ ಇದ್ದು ವೀರಶೈವ ಧರ್ಮವನ್ನು ಆಳವಾಗಿ ಅಭ್ಯಸಿಸಿರಬಹುದು.

ಇಲ್ಲಿಯವರೆಗೆ ಬಂದ ಬಹು ಅಭಿಪ್ರಾಯದ ಪ್ರಕಾರ ಕೀರ್ತಿಶನಿಯ ಪ್ರಭಾವಕ್ಕೆ, ಕರ್ಮದ ಕಳ್ಳ ಹುದುಲಿನಲ್ಲಿ ಬಿದ್ದ ಸಿದ್ಧರಾಮನನ್ನು ಎಚ್ಚರಿಸಲು ಅಲ್ಲಮಪ್ರಭು ಸೊನ್ನಲಿಗೆಗೆ ಬಂದು ಅವನಿಗೆ 'ಒಡ್ಡರಾಮಯ್ಯ' ಎಂದು ಬುದ್ಧಿಪೂರ್ವಕವಾಗಿ ಕೆಣಕಿದ್ದ, ಹೊರಗೆ ಎನಿತು ಸತ್ಕರ್ಮಗಳನ್ನು ಮಾಡುತಲಿದ್ದರೇನು? ಎಂದು ಕ್ರೋಧದ ಕಾಳೋರಗ ಹುತ್ತ ಕಟ್ಟಿರುವವರೆಗೆ ಎಂದು ***'ತನುವೆಂಬ ಏರಿಗೆ ಮನವೆಂಬ ಕಟ್ಟೆ, ಆಚಾರವೆಂಬ ಸೋಪಾನ ಪರಮಾನಂದವೆಂಬ ಜಲವ ತುಂಬಿ ಕೆರೆಯ ಕಟ್ಟಬಲ್ಲದವನಾರನೂ ಕಾಣೆ, ನಾ ಕಟ್ಟಿದ ಕೆರೆ ಸ್ಥಿರವಾಯಿತ್ತು ಗುಹೇಶ್ವರ ನಿಮ್ಮಾಣೆ'.***

ಆಗ ಸಿದ್ಧರಾಮನಿಗೆ ನಾ ಕಟ್ಟಿದ ಕೆರೆ ಅಸ್ಥಿರವೇ? ಎಂಬ ಸಂದೇಹ ಉಂಟಾಯಿತು. ಅದೇ ರೀತಿ ***'ದೇಹದೊಳಗೆ ದೇವಾಲಯವಿದ್ದು ಮತ್ತೆ ಬೇರೆ ದೇವಾಲಯವೇಕೆ? ಗುಹೇಶ್ವರಾ ನೀನು ಕಲ್ಲಾದರೆ ನಾನೇನಪ್ಪನಯ್ಯಾ?'*** ಎಂದಾಗ ಸಿದ್ಧರಾಮನಿಗೆ ***'ಅರಿವು'*** ಉಂಟಾಯಿತು. ***'ಕರ್ಮಕಾಂಡ ಯೋಗಂಗಳೆಲ್ಲವೂ ಭವದ ತೆಕ್ಕೆಗೆ ಒಳಗು'*** ಎಂಬ ತೀರ್ಮಾನ ತಿಳಿಸಿದ ಪ್ರಭು. ಆಗ ಸಿದ್ಧರಾಮ 'ಕರ್ಮವೇ ತ್ಯಾಜ್ಯ ಎಂಬುದನ್ನು ಒಪ್ಪಬಹುದೇ ಕೃಷಿಯ ಮಾಡಿ ಉಣ್ಣದೇ ಹಸಿವು ಹರಿವ ಪರಿ ಇನ್ನೆಂತೋ' ಎಂದಾಗ ಅಲ್ಲಮ-

***ಕರ್ಮವೇ ಪ್ರಾಣವೆಂದು ಮಾಡುವಾಗ***
***ಜ್ಞಾನವನರಿವ ನೆಲೆ ಶುದ್ಧವಿನ್ನಾವುದು***
***ಸಾವನ್ನಕ್ಕೂ ಸಾಧನೆಯ ಮಾಡಿ***
***ಕಾಡುವ ಠಾವಿನ್ನಾವುದು ?***

ಕರ್ಮವೇ ಪ್ರಾಣವಾಗಿರಬಾರದು, ಸಾಯುವವರೆಗೂ ಸಾಧನೆ ಯನ್ನು ಮಾಡದೇ ಹೋದರೆ?
ಎಂದು ಹೇಳಿ ಸ್ಥಾವರಲಿಂಗ ಇಷ್ಟಲಿಂಗ ಲಿಂಗಪೂಜೆಗಳಲ್ಲಿರುವ ಅಂತರವನ್ನು ವಿವರಿಸಿ ***'ಕುರುಹುವಿಡಿದು ಕುರುಹುಗೆಡುವ'*** ಶರಣನನ್ನು(ಬಸವಣ್ಣ) ಕಾಣುವಾ ಎಂದು ಕಲ್ಯಾಣಕ್ಕೆ ಕರೆದೊಯ್ದು, ಸಿದ್ಧರಾಮ ಕಲ್ಯಾಣಕ್ಕೆ ಬಂದದ್ದು, ಚೆನ್ನ ಬಸವಣ್ಣನಿಂದ ವೀರಶೈವದೀಕ್ಷೆ ಪಡೆದು ಲಿಂಗಾಂಗಿ ಆದದ್ದು, ಅನುಭವ ಮಂಟಪದ ಚರ್ಚೆಯಲ್ಲಿ ಪಾಲುಗೊಂಡಿದ್ದು, ಕ್ರಾಂತಿಯ ನಂತರ ಪುನಃ ಸೊನ್ನಲಿಗೆಗೆ ಹೋಗಿ ಅಭಿನವ ಕೈಲಾಸವನ್ನಾಗಿ ಮಾಡಿ, ಕೆರೆಯೊಳಗೊಂದು ಸಮಾಧಿಯನ್ನು ನಿರ್ಮಿಸಿ ಅಲ್ಲಿಯೇ ಪರಿಪೂರ್ಣ ಶೂನ್ಯದಲ್ಲಿ ನಿರ್ವಯಲಾದರು.

ಯೋಗಿಗಳ ಯೋಗಿ ಸಿದ್ಧರಾಮಯ್ಯ ತಮ್ಮ ವಚನ ಒಂದರಲ್ಲಿ ಅರವತ್ತೆಂಟು ಸಾವಿರ ವಚನಗಳ ಹಾಡಿಹಾಡಿ ಸೋತಿತ್ತೆನ್ನಮನ ಎಂದರೂ (ಬೇರೆ ಶರಣರ ವಚನಗಳನ್ನು ಸೇರಿ) ಉಪಲಬ್ಧವಿರುವ ವಚನಗಳು ೧೯೭೯. ಅವರ ಅಂಕಿತನಾಮಗಳು ***'ಕಪಿಲಸಿದ್ಧಮಲ್ಲಿಕಾರ್ಜುನ', 'ಕಪಿಲಸಿದ್ಧ ಮಲ್ಲಿನಾಥ', 'ಕಪಿಲಸಿದ್ಧಮಲ್ಲಿಕಾರ್ಜುನ ಯೋಗಿನಾಥ'*** ಎಂಬಿವೆ. ಅಲ್ಲದೆ ಸಂಕೀರ್ಣತ್ರಿವಿಧ, ಬಸವಸ್ತೋತ್ರದ ತ್ರಿವಿಧ, ಮಿಶ್ರಸ್ತೋತ್ರದ ತ್ರಿವಿಧ ಅಷ್ಟಾವರಣ ಸ್ತೋತ್ರದ ತ್ರಿವಿಧ ಕೃತಿಗಳನ್ನು ರಚಿಸಿದ್ದಾರೆ.

ವಚನಗಳು ಸರಳ ಭಾಷೆಯಲ್ಲಿರುವುದರಿಂದ, ಅಂತರಂಗಕ್ಕೆ ಹತ್ತಿರವಾಗಿರುವುದರಿಂದ, ಜನಪರವಾಗಿರುವುದರಿಂದ ***'ಅಧ್ವರ ವಚನವೆಂಬುದು ಬಹುವೇದ್ಯವಯ್ಯಾ ನಮ್ಮ ಕಪಿಲಸಿದ್ಧ ಮಲ್ಲಿಕಾರ್ಜುನನ ತಿಳಿಯಲಿಕ್ಕೆ'*** ಎಂದಿದ್ದಾರೆ.

ಸಿದ್ಧರಾಮರಿಗೆ ತಾವು ನೆಲೆ ನಿಂತ ನೆಲವನ್ನೇ ಕೈಲಾಸ ಮಾಡಿಕೊಳ್ಳುವ ವಾಸ್ತವ ಪ್ರಜ್ಞೆ ಇದ್ದಿತು ***'ಎಮ್ಮ ಪುರಾತರಿಗೆ ಸದಾಚಾರದಿಂದ ವರ್ತಿಸಿ ಲಿಂಗಾಂಗ ಸಾಮರಸ್ಯವ ತಿಳಿದು ನಿಮ್ಮ ಪಾದಪದ್ಮದೊಳು ಬಯಲಾದ ಪದವೇ ಕೈಲಾಸವಯ್ಯಾ'*** ಎಂದಿದ್ದಾರೆ.

ಜಾತಿ ವಿಚಾರದ ಬಗ್ಗೆ ಸಿದ್ಧರಾಮರ ದೃಷ್ಟಿ ಜೀವನ ದೊಡ್ಡದು. ಕೆಳವರ್ಗದವರಲ್ಲಿಯ ಬದುಕನ್ನು ಹಿರಿದುಗೊಳಿಸಿ ಇಂದಿಗೂ ಸ್ಮರಣೀಯರಾದವರನ್ನು ಉದಾಹರಿಸಿ ***'ದೂರ್ವಾಸ, ವ್ಯಾಸ, ಕೌಂಡಿನ್ಯನ ಕುಲವ ನೋಳ್ಪಡೆ ಹುರುಳಿಲ್ಲ ಅವರ ನಡೆ ನೋಳ್ಪಡೆ ನಡೆಯುವವರು ತ್ರಿಲೋಕದಲ್ಲಿಲ್ಲ'*** ಎನ್ನುತ್ತಾರೆ.

ಹೆಣ್ಣನ್ನು ಸಾಕ್ಷಾತ್ ದೈವೀಸ್ವರೂಪ ಎಂದಿದ್ದಾರೆ.

*'ತಾ ಮಾಡಿದ ಹೆಣ್ಣು ತನ್ನ ತಲೆಯನೇರಿತ್ತು*
*ತಾ ಮಾಡಿದ ಹೆಣ್ಣು ತನ್ನ ತೊಡೆಯನೇರಿತ್ತು*
*ತಾ ಮಾಡಿದ ಹೆಣ್ಣು ಬ್ರಹ್ಮನ ನಾಲಿಗೆಯನೇರಿತ್ತು*
*ತಾ ಮಾಡಿದ ಹೆಣ್ಣು ನಾರಾಯಣನ ಎದೆಯನೇರಿತ್ತು*
*ಅದು ಕಾರಣ ಹೆಣ್ಣು ಹೆಣ್ಣಲ್ಲ ಹೆಣ್ಣು ರಾಕ್ಷಸಿಯಲ್ಲ*
*ಹೆಣ್ಣು ಪ್ರತ್ಯಕ್ಷ ಕಪಿಲಸಿದ್ಧ ಮಲ್ಲಿಕಾರ್ಜುನ ನೋಡಾ'*

ಕಾಯಕದ ರಹಸ್ಯದ ಬಗ್ಗೆ–

*'ಕೃಷಿಯ ಮಾಡಿ ಉಣ್ಣದೆ ಹರಿವ ಪರಿ ಇನ್ನೆಂತೋ*
*ಕರ್ಮಯೋಗವ ಮಾಡದೆ ನಿರ್ಮಲ ಸುಚಿತ್ರವನರಿವ*
*ಪರಿ ಎಂತೋ*
*ಬೇಯದ ಅಶನವನುಂಬ ತಾವಾವುದು*
*ಕಪಿಲಸಿದ್ಧಮಲ್ಲಿಕಾರ್ಜುನ ಲಿಂಗಕ್ಕೆ?'*
*ಚಿತ್ತ ಶುದ್ಧಿ ಹೊಂದಲುಕರ್ಮಯೋಗವನ್ನು ಕೈಗೊಳ್ಳಬೇಕು*

ಎಂದಿದ್ದಾರೆ.

ಭಗವಂತನ ಸ್ವರೂಪದ ಬಗ್ಗೆ–

*'ಸಕ್ಕರೆಯು ಆಕಾರ ರುಚಿಯು ನಿರಾಕಾರ*
*ಲಿಂಗವಾಕಾರ ಜಂಗಮನಿರಾಕಾರ*
*ಬೆಣ್ಣೆ ಆಕಾರ ಘೃತ ನಿರಾಕಾರ*
*ಆಕಾರ ಬಿಟ್ಟು ನಿರಾಕಾರವಿಲ್ಲ ನಿರಾಕಾರ ಬಿಟ್ಟು ಆಕಾರವಿಲ್ಲ*
*ಲಿಂಗಜಂಗಮವೆಂಬ ಭಯ ಶಬ್ದ ಒಂದೆ ನೋಡಾ'*

ನಿಜವಾದ ಯೋಗಿಯ ಮನಸ್ಸು ಆಕಾರದಿಂದ ನಿರಾಕಾರಕ್ಕೆ ನಿರಾಕಾರದಿಂದ ಆಕಾರಕ್ಕೆ ವಿಹರಿಸಬಲ್ಲುದು.

*'ಯೋಗಿಗೆ ಕೋಪವೇ ಮಾಯೆ*
*ರೋಗಿಗೆ ಅಪಥ್ಯವೇ ಮಾಯೆ*
*ಅರಿದೆನೆಂಬವಂಗೆ ನಾನು ನೀನು ಎಂಬುದೆ ಮಾಯೆ'*

ಎಂಬ ಅರ್ಥವನ್ನು ಮಾಯೆಗೆ ಕೊಟ್ಟಿದ್ದಾರೆ.

ಶರೀರ ಧರಿಸಿ ಅದಕ್ಕೆ ಅಂಟಿಯೂ ಅಂಟದಂತಿರಬೇಕು ಎಂದು–

*'ಕಾಯಧರಿಸಿದಾತ ನವನೀತ ಹೋಮದಂತಿರಬೇಕು*
*ಮುಕುರದಲ್ಲಿರುವ ಪ್ರತಿಬಿಂಬದಂತಿರಬೇಕು*
*ಬೆಟ್ಟದಲ್ಲಿರುವ ಕಾಡ್ಗಿಚ್ಚಿನಂತಿರಬೇಕು*
*ಆಷಾಢದ ಚಂಡಮಾರುತನಂತಿರಬೇಕು*
*ಸರ್ವರೊಳು ಸರ್ವರಂತಾಗಿರಬೇಕು'* ಎಂದು ಎಲ್ಲರೊಡನೆ ಎಲ್ಲರಂತಿದ್ದು ತನ್ನತನ ಉಳಿಸಿಕೊಳ್ಳಬಹುದು ಎಂದಿದ್ದಾರೆ.

ವಿಶ್ವದ ಅದ್ವೈತ ಸ್ವರೂಪವನ್ನು ಆಶ್ರಮ ಭೇದದಿಂದ ಉಂಟಾಗುವ ಆಭಾಸವನ್ನು

*'ಉದಕವೆಲ್ಲ ಒಂದೇ*
*ಈಚಲವ ಆಶ್ರಯಿಸಿ ಮದ್ಯಪಾನವೆನಿಸಿತ್ತು*
*ಸುರತರುವ ಆಶ್ರಯಿಸಿ ಅಮೃತವೆನಿಸಿತ್ತು*
*ದೇಹವೆಲ್ಲ ಒಂದೇ*
*ಅಂಗನೆಯ ಆಶ್ರಯಿಸಿ ಭವಕ್ಕೆ ಬೀಜವಾಯಿತ್ತು*
*ಲಿಂಗವ ಆಶ್ರಯಿಸಿ ಭವಾರಣ್ಯಕ್ಕೆ ದಾವಾನಲವೆನಿಸಿತ್ತು'*

ವಾಸ್ತವವಾಗಿ ಮೂಲತಃ ಅವೆಲ್ಲ ಏಕ ಮಾಯೆಯ ಪ್ರಭಾವದಿಂದ ಏಕ ಅನೇಕವಾಗುತ್ತದೆ ಅಥವಾ ತೋರುತ್ತದೆ.

ಭಕ್ತಿಯ ಉತ್ಕಟತೆ, ಕಳಕಳಿ ಆರ್ತತೆಗಳು ಪ್ರಕಟವಾಗಿ ತನ್ನ ಸಂಸಾರಗ್ರಸ್ತತೆ ನಿವೇದಿಸಿ ತನ್ನನ್ನು ಉದ್ಧರಿಸುವಂತೆ ಈ ರೀತಿ ಮೊರೆ ಇಡುತ್ತಾರೆ.

*'ಸಂಸಾರವೆಂಬ ರಾಹುವಿನ ಅಣಲೊಳಗೆ ಇದ್ದಹೆನಯ್ಯಾ*
*ಆವಾಗ ನುಂಗಿಹಿತೆಂದರಿಯೆ*
*ಆವಾಗ ಉಗುಳಿಹಿತೆಂದರಿಯೆನಯ್ಯಾ*
*ಅದರ ಬಾಯಿಂದೆನ್ನ ತೆಗೆದುಕಾಯಯ್ಯಾ'* ಎಂದಿದ್ದಾರೆ.

ತನ್ನನ್ನು ಭಕ್ತಿಚೇತನಕ್ಕೆ ಒಲಿಸೆಂದಯ್ಯ

*'ಕಂಗಳ ಬೇಟೆಯನಾಡುವ ಕಾಮನ ಸಂಗಕ್ಕೆನ್ನಸಲಿಸದೆ*
*ಮಂಗಳಮಯನಪ್ಪುರುತರ ಭಕ್ತಿಯ*
*ಸಂಗಕ್ಕೆನ್ನಸಲಿಸಯ್ಯಾ ಅನಂಗ ವಿದಾರಣಾ....'*

ದೈವಸಾಕ್ಷಾತ್ಕಾರಕ್ಕೆ ಭಕ್ತನ ತೊಳಲಾಟವನ್ನು–

*'ಗಿರಿಗಹ್ವರದೊಳರಸಿ ಬಳಲಿದೆನವ್ವಾ*
*ನೋಡಿ ನೋಡಿ ಕಣ್ಣುನಟ್ಟಾಲಿ ಬಿದ್ದನವ್ವಾ'* ಎಂದು

ಅಳಲಿ ಕಾಯವ ದೈವವೇ ಕೊಲ್ಲಬಾರದು ಎಂದು

*'ಈ ಪ್ರಪಂಚದಲ್ಲಿ ಎನ್ನ ಗೋಳಾಡಿಸಬಾರದಯ್ಯಾ'* ಎನ್ನುತ್ತಾರೆ.

ಕೊನೆಗೆ ಸಿದ್ಧಿ ಸ್ಥಿತಿಯಲ್ಲಿ ತನಗುಂಟಾದ ಸಂತೃಪ್ತಿ ಸಂತೋಷ ಧನ್ಯತೆಗಳನ್ನು–

*'ಅರಲುಗೊಂಡ ಕೆರೆಗೆ ತೊರೆಬಂದು ಹಾಯ್ದಂತೆ*
*ಎಲೆ ಅಯ್ಯಾ, ನಿಮ್ಮ ಕಂಡು ಕಂಗಳು ಕಡೆಗೋಡಿ*
*ವರಿದುವಯ್ಯಾ*
*ಎನ್ನಮನಕ್ಕೆ ಮನ ವೇದ್ಯವಾದಡೆ ಕ್ಷೈಮರೆದೆನೆಲೆ ಆಹಾ*
*ಅಯ್ಯಾ*
*ಕಪಿಲಸಿದ್ಧಮಲ್ಲಿನಾಥನ ಕಂಡ ಸುಖವು ಅರಿಗೆಯೂ ಇಲ್ಲ'*

ಬತ್ತಿದ ಕೆರೆಗೆ ತೊರೆಬಂದಾಗ ಆಗುವ ಅದ್ಭುತ ತೃಪ್ತಿ ಆನಂದ, ಜೀವಾತ್ಮನನ್ನು ಪರಮಾತ್ಮ ಆಕ್ರಮಿಸಿದಾಗ ಆಗುತ್ತದೆ ಎಂದಿದ್ದಾರೆ.

ಸಿದ್ಧರಾಮರು ತನ್ನ ವಚನಗಳಲ್ಲಿ ಶ್ಲೇಷಾಲಂಕಾರ ಬಳಸಿದ್ದಾರೆ.

*'ತಿಳಿನೀರೆಂಬೆ ತಿಳಿನೀರೆಂಬೆ*
*ತಿಳಿನೀ ಎಂದು ಒಂದು ದಿನ ಎಂದಿಲ್ಲೆಲೆ ಮಾನವಾ*
*ಕ್ಷಣಕ್ಷಣಕ್ಕೆ ತಿಳಿನೀ ಎಂದಡೆ*
*ತಳುಹದೆ ತನ್ನ ನಿಜವ ಕೊಡನೆ ಕಪಿಲಸಿದ್ಧಮಲ್ಲೇಂದ್ರ'*

ಮೊದಲ 'ತಿಳಿನೀರು' ಅಂದರೆ ನಿರ್ಮಲದ್ರವ; 'ತಿಳಿ' ಅಂದರೆ ಜ್ಞಾನ–ಅರಿವು ಮತ್ತು ಕಾಣು(ಕ್ರಿಯಾಪದ); ಕ್ಷಣ ಕ್ಷಣಕೆ ತಿಳಿನೀ ಎಂದರೆ ನಿನ್ನನ್ನು ನೀನು ತಿಳಿದುಕೋ ಎಂದರ್ಥ ವಾಗುವುದು.

ಬೆಡಗಿನ ವಚನವನ್ನು ರಚಿಸಿದ್ದಾನೆ.

*'ಜಲದ ಸಿಂಹಾಸನದ ಕೆಲದಷ್ಟಮ ಬೆಟ್ಟ*
*ಕುಲಗಿರಿಗಳೆರಡು ಮತ್ತಿಕ್ಕೆಲದಲಿ*
*ನೆಲೆಯರಿಯರು ಬ್ರಹ್ಮ ಕುಲವರಿಯರು ಯೋಗ*
*ಹೊಲಬುಗೆಟ್ಟರು ಯೋಗಸಿದ್ಧರೆಲ್ಲಾ*
*ಈ ರಾರನೊಂದೆಂದು ಹಿಡಿದಾತ*
*ನಿಷ್ಕಲಯೋಗಿ ತಾ ಕಪಿಲಸಿದ್ಧಮಲ್ಲಿನಾಥ'*

ಜಲದಸಿಂಹಾಸನ ಎಂದರೆ ದೇಹವೆಂಬ ಪೀಠ ಅದರ ಪಕ್ಕದಲ್ಲಿ ಅಷ್ಟಬೆಟ್ಟ ಎಂದರೆ ಅಷ್ಟಮದಗಳು ಮತ್ತು ಇಕ್ಕೆಲದಲ್ಲಿ ಅಹಂಕಾರ ಮಮಕಾರಗಳು. ಇವುಗಳ ವಶವಾಗಿರುವವರು ಬ್ರಹ್ಮ ಯೋಗ. ಇವುಗಳನ್ನು ಅರಿಯದೇ ದಾರಿದಪ್ಪಿ ಅಜ್ಞಾನಿಗಳಾಗಿದ್ದಾರೆ. ಬ್ರಹ್ಮಸಾಧನೆಯಾಗ ಬೇಕಾದರೆ ಈರಾರ ನೊಂದೆಂದು ಹಿಡಿದು ಅಂದರೆ ಷಟ್ಸ್ಥಲ, ಷಟ್‌ಲಿಂಗ ಸ್ವರೂಪ, ಲಿಂಗಾಂಗ ಸಾಮರಸ್ಯ ಸಾಧ್ಯ.

ಈ ತತ್ವವನ್ನರಿದವನೇ ನಿಷ್ಕಲಯೋಗಿ'ಯಾದ. ಕರ್ಮಯೋಗಿಯಾದ ಸಿದ್ಧರಾಮ ಶಿವಯೋಗಿ ಆದ

*'ಕಂತುವನೆ ಕಂಗೆಡಿಸಿಂಪೊಂ*
*ಕ್ಕುಂತರಂಗ ವಿಚಾರವೆಲ್ಲವ*
*ಸಂತೆಯಂಗಡಿಯಂತೆ ಸೊನ್ನಲಪುರದೊಳೊಡ್ಡೈಸಿ*
*ಚಿಂತಿತಾರ್ಥವನರ್ಥಿಗಿತ್ತು ನಿ*
*ರಂತರ ಅಖಿಳರಿಗರಿವನೀವ ಮ*
*ಹಂತನೆನಿಸಿದ ಸಿದ್ಧರಾಮಯ್ಯಂಗೆ ಶರಣಾರ್ಥಿ'*

–ಚಾಮರಸ

❋

**ವಚನಗಳು**

ಓದಿದ ಫಲ ಕೂಚಭಟ್ಟನಂತಾಗಬಾರದು ;
ಓದಿದ ಫಲ ಪಾರಾಶರನಂತಾಗಬಾರದು ;
ಓದಿದ ಫಲ ಮಯೂರನಂತಾಗಬಾರದು ;
ಓದಿದ ಫಲ ನಮ್ಮ ಹಾವಿನ ಹಾಳ ಕಲ್ಲಯ್ಯನ
ಮನೆಯ ಶ್ವಾನನಂತಾಗಬೇಕು ಕಾಣಾ
ಕಪಿಲಸಿದ್ಧಮಲ್ಲಿಕಾರ್ಜುನ !

* * *

ಕೈಯಲ್ಲಿ ಹಿಡಿದು ಕಾಂಬುದು
ಕರ್ಮಪೂಜೆಯಲ್ಲವೆ ?
ಮನದಲ್ಲಿ ನೆನೆದು ಮಾಡುವುದೆಲ್ಲವು ಕಾಯದ
ಕರ್ಮವಲ್ಲವೆ ?
ಭಾವಶುದ್ಧವನರಿವ ಪರಿ ಇನ್ನಾವುದು ಹೇಳಾ,
ಕಪಿಲಸಿದ್ಧಮಲ್ಲಿಕಾರ್ಜುನಾ

* * *

ಕುಲಜನಾಗಿ ನಾನೇವೆನಯ್ಯಾ ?
ಕುಲದ ಬಳಿಯ ದೇವನಲ್ಲ, ಮನದ ಬಳಿಯ
ದೇವನ್ಯೆಸೆ ?
ಆವ ಯೋನಿಜನಾದಡೇನು ನೀನೊಲಿದವನೆ
ಕುಲಜನಯ್ಯಾ ಕಪಿಲಸಿದ್ಧಮಲ್ಲಿಕಾರ್ಜುನಾ !
– ಸೊನ್ನಲಿಗೆಯ ಸಿದ್ಧರಾಮ



# ಒಕ್ಕಲುತನವೆಂಬ ಜೂಜಾಟ

–ಈರಯ್ಯ ಕಿಲ್ಲೇದಾರ*

ಮೀನಿನಂತೆ ಈಜಲಾರರು. ಹಕ್ಕಿಯಂತೆ ಹಾರಲಾರರು. ರೈತವರ್ಗಕ್ಕೆ ಅನ್ವಯಿಸುವ ಮಾತಿದು. ಗ್ಯಾಟ್ ಒಪ್ಪಂದ, ಡಂಕೆಲ್ ಪ್ರಸ್ತಾಪ ಹಾಗೂ ಮುಕ್ತ ವಹಿವಾಟುಗಳ ಮತ್ತು ಬಂಡವಾಳಶಾಹಿಗಳ ಕಪಿಮುಷ್ಠಿಯಲ್ಲಿ ಬಹುಸಂಖ್ಯಾತ ರೈತರು ಬಡಕಲಾಗುತ್ತಿದ್ದಾರೆ. ಗಳೆ ಹೊಡೆಯುವುದರಿಂದ ಹಿಡಿದು, ಬೆಳೆ ಮಾಡಿ, ಕೀಟ, ಕಳೆ ಕಸಗಳಿಂದ ಬೆಳೆಯನ್ನು ರಕ್ಷಿಸಿ, ಕೊಯ್ಲು ಒಕ್ಕಣೆ ಮಾಡಿ, ಮಾರಾಟ ಮಾಡುವ ಎಲ್ಲ ಹಂತಗಳಲ್ಲೂ ರೈತರು ಪರತಂತ್ರರಾಗಿದ್ದಾರೆ. ಶ್ರೀಮಂತ ರಾಷ್ಟ್ರಗಳು ತಮ್ಮ ಯಂತ್ರ, ತಂತ್ರ ಹಾಗೂ ಬೀಜಗಳನ್ನು ದುಬಾರಿ ಬೆಲೆಗೆ ಮಾರಾಟ ಮಾಡುವ ಬಲೆಯಲ್ಲಿ ರೈತರನ್ನು ಸಿಲುಕಿಸಿವೆ. ಭೂಮಿಯೇ ಆಳುವ ಶಕ್ತಿಯಾದ ಕಾಲ ಇದಲ್ಲ. ಹಣವೊಂದೇ ನಿರ್ಣಾಯಕ. ಹಣವೇ ಆಳುವ ಶಕ್ತಿ ಎನಿಸಿದೆ. ಶ್ರೀಮಂತರ ಬಲವೂ ಹಣವೇ ಆಗಿದೆ. ಹಣದಾಸೆಗೆ ಬಲಿಯಾಗಿ, ಹಣ ಗಳಿಸಲೆಂದೇ ರೈತರು ವಾಣಿಜ್ಯ ಬೆಳೆಗಳನ್ನು ಮಾಡುತ್ತಿದ್ದಾರೆ. ರೈತರು ದನಕರು ಸಾಕುತ್ತಾರೆ. ಧವಸ ಧಾನ್ಯ ಬಿತ್ತಿ ಬೆಳೆಯುತ್ತಾರೆ. ಅದಕ್ಕೆಲ್ಲಾ ಸಾಲ ಮಾಡುತ್ತಾರೆ. ಬಂಡವಾಳ ಹೂಡುತ್ತಾರೆ. ಬ್ಯಾಂಕುಗಳಲ್ಲಿ ಭೂಮಿ ಒತ್ತೆ ಇಡುತ್ತಾರೆ. ಸರಳ ನಿರಾಡಂಬರ ಜೀವನ ನಡೆಸುತ್ತಾರೆ. ನಮ್ಮ ರೈತರು ಮುಗ್ದರು ಹಾಗೂ ದೇಶದ ಬೆನ್ನೆಲುಬು ಎಂದೆಲ್ಲಾ ಹೇಳುವವರು. ರೈತರ ಉದ್ದಾರ ಮಾಡಲು ಬರುತ್ತಾರೆ. ಸಂಪ್ರದಾಯ ಮೂಢ ನಂಬಿಕೆಗಳಿಂದ ರೈತರನ್ನು ಮುಕ್ತ ಮಾಡಿ, ವೈಜ್ಞಾನಿಕ ಹಾಗೂ ಲಾಭದಾಯಕ ಕೃಷಿ ಮಾಡಲು ಪ್ರೇರಣೆ ನೀಡುತ್ತಾರೆ. ರೈತರ ಜೀವನಮಟ್ಟ ಸುಧಾರಿಸಲು ಬರುವವರು ತಮ್ಮ ಜೀವನ ಮಟ್ಟಕ್ಕೆ ರೈತರನ್ನು ತರಬೇಕೆಂದು ಬಯಸುವುದಿಲ್ಲ. ರೈತರಂತೆ ಅವರು ಸರಳ ನಿರಾಡಂಬರ ಜೀವನ ನಡೆಸಲು ಮನಸ್ಸು ಮಾಡಲಾರರು. ರೈತರು ಪಡುವ ಕಾಯಕಷ್ಟ ಅವರಿಗೆ ಬೇಕಿಲ್ಲ. ರೈತರಂತೆ ಸಾಲ ಮಾಡಲಾರರು. ಹಾನಿ ಅನುಭವಿಸಲಾರರು. ರೈತರ ಮಕ್ಕಳಂತೆ ತಮ್ಮ ಮಕ್ಕಳು ಆಗಲೆಂದು ಯೋಚಿಸಲಾರರು. ರೈತನ ಮಗನೇ ಅಧಿಕಾರಿಯಾಗಿ, ಉಪನ್ಯಾಸಕನಾಗಿ, ಶಿಕ್ಷಕನಾಗಿ, ಮಂತ್ರಿ-ಶಾಸಕನಾದರೂ ತನ್ನ ಮಕ್ಕಳಾಗಲಿ, ತಾನಾಗಲಿ ಹಳ್ಳಿಯಲ್ಲಿ ಕಾಲೂರಿ ನಿಲ್ಲಲಾರ. ಇಂದಿನ ಪೀಳಿಗೆಗೆ ಹಳ್ಳಿಯ ಬದುಕಿನ ಪಾಠಗಳು ಪಠ್ಯದಲ್ಲೂ ಓದಲು ಸಿಗಲಾರವು. ರೈತರ ಬೆವರು ಚರಂಡಿಗಳಲ್ಲಿ ಹರಿಯುವುದು ಯಾರಿಗೂ ಕಾಣದು.

ಮಹಾತ್ಮಾ ಗಾಂಧೀಜಿಯವರು 'ಹಳ್ಳಿಗೆ ನಡೆಯಿರಿ' ಎಂದು ಕರೆ ಕೊಟ್ಟಿದ್ದರು. ಹಳ್ಳಿಗಳನ್ನು ತೊರೆಯಿರಿ ಎಂದು ಯಾರೂ ಹೇಳದೆ, ಕರೆ ಕೊಡದೆ ಇದ್ದರೂ, ನಗರದಡೆ ಎಲ್ಲರೂ ಮುಖ ಮಾಡಿದ್ದಾರೆ. ನಗರದ ಜನರಿಗೆ ಬಟನ್ ಒತ್ತಿದರೆ ದೀಪ ಬೆಳಗುತ್ತದೆ. ಬಿಸಿಲು ತಂಪಾಗುತ್ತದೆ. ಗಾಳಿ ಬೀಸುತ್ತದೆ. ಅವರೆಂದೂ ಸೋರುವ ಮನೆಯಲ್ಲಿ, ರಾತ್ರಿಯಿಡಿ ಕತ್ತಲೆಯಲ್ಲಿ ಮಿನುಕು ದೀಪದ ಬೆಳಕಿನಲ್ಲಿ ಕಳೆದವರಲ್ಲ. ಒಕ್ಕಲುತನ ಪುಸ್ತಕ ಓದಿ ಮಾಡುವ ವೃತ್ತಿಯಲ್ಲ. ಪುಸ್ತಕ ಓದಿ ಕಲಿತವರು ಒಕ್ಕಲುತನ ಹಾಗೆ ಮಾಡಬೇಕು, ಹೀಗೆ ಮಾಡಬೇಕೆಂದು ಹೇಳುವುದು, ಅಮ್ಮನಿಗೆ ಕೆಮ್ಮು ಕಲಿಸಿದಂತೆ. ನಮ್ಮ ದೇಶದ, ನಮ್ಮ ಭೂಮಿಯ, ನಮ್ಮ ಹವೆ, ಹಂಗಾಮಿಗೆ ತಕ್ಕ ಕೃಷಿಯನ್ನು ಅಧ್ಯಯನ ಮಾಡದವರು ಕೃಷಿಕರನ್ನು ಹಾದಿ ತಪ್ಪಿಸುತ್ತಿದ್ದಾರೆ. ಹಾಗೆಂದರೆ ರೈತರು ದಡ್ಡರಲ್ಲ. ಮುಗ್ದರು, ಇವರ್‍ಯಾಕೆ ಕೇಳಬೇಕು?ಆಶೆ ಒಂದಿದೆಯಲ್ಲಾ ಸ್ವಾಮಿ!

ಕೃಷಿಯನ್ನು ಕುರಿತಂತೆ ಹೊಸ ವಿಶ್ಲೇಷಣೆ ಸುರುವಾಗಿದೆ. ಬಹುಸಂಖ್ಯಾತರ ಶ್ರಮದ ಮೇಲೆ ಅಲ್ಪಸಂಖ್ಯಾತ ಆಳುವ ವರ್ಗ ಐಶ್ಯಾರಾಮಿ ಜೀವನ ನಡೆಸುತ್ತಿದ್ದಾರೆ.

* ಕವಿತಾ ಪ್ರಕಾಶನ, ಗುಡಿಕಟ್ಟೆ ಮತ್ತು ಅಂಚೆ, ಗೋವನಕೊಪ್ಪ, ಬೆಳಗಾವಿ ಜಿಲ್ಲೆ. ೫೯೧ ೧೦೪.





ಹೀಗಾಗಿ ರೈತರು ಇಡೀ ಸಮಾಜದ ಅಡಿಯಾಳು ಆಗಿದ್ದಾರೆ. ಹಣಕ್ಕಾಗಿ ರೈತರು ನೊರೆ ಹಾಲನ್ನು ಮಾರುತ್ತಾರೆ. ಉತ್ತಮವಾದ ಕಾಳು-ಕಾಯಿ, ಹಣ್ಣು ಎಲ್ಲವನ್ನೂ ಮಾರಿ ಹಣ ಪಡೆಯಲು ಮುಂದಾಗುತ್ತಾರೆ. ಜೊಳ್ಳು-ಜೊಟ್ಟು ಶೇಂಗಾ ತಾವು ತಿಂದು, ಉತ್ತಮ ದರ್ಜೆಯ ಶೇಂಗಾ ಕಾಯಿ ಮಾರಾಟ ಮಾಡುತ್ತಾರೆ. ಪೌಷ್ಠಿಕಾಂಶ ಗಳಿಲ್ಲದ, ತರಕಾರಿ, ಆಹಾರ ಧಾನ್ಯ ಮತ್ತು ಹಣ್ಣುಗಳನ್ನು ತಿನ್ನುತ್ತಾರೆ. ಅನಾರೋಗ್ಯದಿಂದ ಬಳಲುತ್ತಾರೆ. ಡಾಕ್ಟರ ಮುಂದೆ ಸರತಿ ಸಾಲಿನಲ್ಲಿ ನಿಲ್ಲುತ್ತಾರೆ.

ಇದೀಗ ಕಾರ್ಪೊರೇಟ್ ವಲಯ ಹೊಲದಲ್ಲಿ ಕಾಲಿಟ್ಟಿದೆ. ರಫ್ತು ಆಧಾರಿತ ಕೃಷಿ ಉತ್ಪನ್ನಗಳನ್ನು ಜಾಗತಿಕ ಮಾರುಕಟ್ಟೆಗೆ ಬೇಕಾದ ಸರಕನ್ನು ಬೆಳೆಸಲು, ಗುತ್ತಿಗೆ ಕೃಷಿಯ ಮುಖವಾಡ ಹೊತ್ತು ರೈತರ ಉದ್ಧಾರಕ ತಾನೆಂಬಂತೆ ಬೆನ್ನು ಚಪ್ಪರಿಸಿಕೊಳ್ಳುತ್ತಿದೆ. ಇಲ್ಲಿರುವ ಮಣ್ಣು, ಹವಾಗುಣ, ರೈತರಲ್ಲಿರುವ ಕಷ್ಟಸಹಿಷ್ಣುತೆ ಹಾಗೂ ರೈತರಲ್ಲಿರದ ಪ್ರತಿಭಟನಾ ಶಕ್ತಿಯನ್ನು ಸಮರ್ಥವಾಗಿ ಬಾಚಿಕೊಳ್ಳುತ್ತಿವೆ. 'ಎಕರೆ ಹೊಲದಲ್ಲಿ ಇಂಥಾ ಬೆಳೆ ಬೆಳೆದು ಲಕ್ಷಾಧೀಶರಾಗಿ', ಜೇನಿನಂಥ ಮಧುರ ಹಾಗೂ ಸಿಹಿಯಾದ ಮಾತಿನ ಜಾಹೀರಾತು ನೀಡಿ ವಂಚಿಸುತ್ತಿದ್ದರೆ; ಶೋಷಣೆ ಮಾಡುತ್ತಿದ್ದಾರೆ. ಬೀಜ, ರಸಗೊಬ್ಬರ, ಕೀಟನಾಶಕಗಳನ್ನು ಕಂಪನಿಯೆ ಕೊಡುತ್ತದೆ. ಹೊಲಕ್ಕೆ ಬಂದು ತಾನೇ ಖರೀದಿಸಿಕೊಂಡು ಹೋಗುತ್ತದೆ. ಕ್ವಿಂಟಾಲ್‌ಗೆ ಇಂತಿಷ್ಟು ಎಂದು ಬೆಲೆಯನ್ನು ಮೊದಲೇ ನಿಗದಿಪಡಿಸುತ್ತದೆ. ಅಬ್ಬಬ್ಬಾ ಎಂದ ರೈತ ಬೆಳೆ ಮಾಡಲು ಮುಂದಾಗುತ್ತಾನೆ. ನಾಳೆ ಉತ್ಪನ್ನ ಬಂದಾಗ ಗುಣಮಟ್ಟದ ನೆಪ ಮುಂದೆ ಮಾಡಿದ ಕಂಪನಿ ಕಾರ್ಖಾನೆಯಲ್ಲಿ ತಯಾರಾದ ಆಕಾರ, ಬಣ್ಣ ಮತ್ತು ಅಳತೆಯ ಚೌಕಟ್ಟಿನಲ್ಲಿ ನಿಂತಷ್ಟೇ ಉತ್ಪನ್ನ ತಾನು ಹೇಳಿದ ದರಕ್ಕೆ ಖರೀದಿಸಿ, ತಾನು ಕೊಟ್ಟ ಕೃಷಿ ಪರಿಕರಗಳ ಮೊತ್ತವನ್ನು ಮುರಿದುಕೊಂಡು ಉಳಿದ ರಖಮು ಕೊಡುತ್ತದೆ. 50 ರೂಪಾಯಿ ಆದಾಯ ರೈತನಿಗೆ ಬಂದರೆ ನೂರಕ್ಕೂ ಹೆಚ್ಚಿನ ಆದಾಯ ಕಂಪನಿ ಪಾಲಿಗೆ, ಉಳಿದ ಉತ್ಪನ್ನ ರೈತರಿಗೆ ತಿನ್ನಲಾಗದು. ದನಕರುಗಳೂ ತಿನ್ನುವಂತಿಲ್ಲ. ಆಗ ರೈತರು ಹರಕೆಯ ಕುರಿಯಂತೆ ತೋರಣದ ಎಲೆ ತಿನ್ನಬೇಕಷ್ಟೆ. ಎಲ್ಲೋ ಒಬ್ಬ ರೈತ ಅಷ್ಟಿಷ್ಟು ದೊಡ್ಡ ಧ್ವನಿಯಲ್ಲಿ ಕಂಪನಿ ಬಾಯಿ ಬಂಡವಾಳ ಮಾಡಿಕೊಳ್ಳುವುದು.

ಯಾವುದೇ ಬೆಳೆಯನ್ನು ಕಂಪ್ಯೂಟರಿನಲ್ಲಿ ಬೆಳೆಯಲಾಗದು. ಕಂಪ್ಯೂಟರಿನಿಂದ ಕೊಯ್ಲು ಮಾಡಲಾಗದು. ಬಂಡವಾಳ ಹೂಡಲು ಬನ್ನಿ ಬನ್ನಿ ಎಂದು ಗೋಗರೆವ ರಾಜಕಾರಣಿಗಳು ರೈತರನ್ನು ಬಲಿಕೊಡಲು ಹಿಂದೆ ಮುಂದೆ ನೋಡಲಾರರು. ಮಾನ್ಸೂನ್ ಮಳೆಯಾಗಲಿ, ಅದನ್ನು ಅವಲಂಬಿಸಿದ ರೈತನ ಬದುಕೂ ಜೂಜಾಟ ಎನಿಸಿದೆ. ಒಕ್ಕಲುತನವನ್ನು ಲಾಟರಿಗೆ ಹೋಲಿಕೆ ಮಾಡಿರುವುದು ಇದೇ ಕಾರಣಕ್ಕೆ. ಕಾರ್ಪೊರೇಟ್ ಕಂಪನಿಗಳು ಒಮ್ಮೆ ಉತ್ತಮ ಬೀಜ ಕೊಟ್ಟಂತೆ ಮಾಡಿ ಮತ್ತೊಮ್ಮೆ ನಕಲಿ ಬೀಜ ಕೊಡುವುವು. ಒಬ್ಬರಿಗೆ ಗುಣಮಟ್ಟದ ಬೀಜ, ತಂತ್ರಜ್ಞಾನ ಮತ್ತು ರಾಸಾಯನಿಕ ಕೀಟನಾಶಕ ಮಾರಾಟ ಮಾಡಿದರೆ ೯೯ ಜನರಿಗೆ ನಕಲಿ ಹಾಗೂ ಕಳಪೆ ಗುಣಮಟ್ಟದ ಬೀಜ, ಕೀಟನಾಶಕ ಮಾರಾಟ ಮಾಡುತ್ತವೆ. ಒಬ್ಬರಿಬ್ಬರಿಗೆ ಲಾಟರಿ ಸಿಕ್ಕರೆ ಇನ್ನುಳಿದವರಿಗೆ ಪಂಗನಾಮ !

ಮಧ್ಯಮ ವರ್ಗದ ರೈತರು, ಶ್ರೀಮಂತ ವರ್ಗದ ರೈತರೊಡನೆ ಗುರುತಿಸಿಕೊಳ್ಳಲಾಗದು. ಇತ್ತ ಬಡ ಕೃಷಿಕೂಲಿಕಾರರೊಡನೆ ಅವರ ಮಟ್ಟದಲ್ಲಿ ಜೀವನ ನಡೆಸಲಾಗದು. ದುಬಾರಿಯ ಖರ್ಚು ವೆಚ್ಚ ನಿಭಾಯಿಸಲೂ ಆಗದೆ, ಏನೂ ಖರ್ಚು ಮಾಡಲೂ ಆಗದೆ ಗಲಿಬಿಲಿಗೊಂಡಿದ್ದಾರೆ. ರೈತರ ಉತ್ಪನ್ನಗಳನ್ನು ಕಚ್ಚಾ ಮಾಲು ಎಂದೇ ಪರಿಗಣಿಸುವ ಕಂಪನಿಗಳು, ಸಹಕಾರಿ ಸಂಸ್ಥೆಗಳು, ಸಕ್ಕರೆ, ಹತ್ತಿ ಮತ್ತು ಖಾದ್ಯ ತೈಲದ ಕಾರ್ಖಾನೆಗಳು ರೈತರ ಬೆನ್ನ ಮೇಲೆ, ಮತ್ತಷ್ಟು ಭಾರ ಹಾಕಿ, ರೈತರನ್ನ ಮೇಲೇಳಗೊಡುತ್ತಿಲ್ಲ. ಹಾಲು ಇರಬಹುದು, ಕಬ್ಬು ಇರಬಹುದು. ಕಡಿಮೆ ಬೆಲೆಗೆ ಖರೀದಿಸಿ ದುಬಾರಿ ಬೆಲೆಗೆ ಮಾರುವ ತಂತ್ರ ಅವರದಾಗಿದೆ. ಪಡೆದ ಲಾಭ ರೈತ ಬೆಳೆದದ್ದರಿಂದ ಎಂಬುದನ್ನು ಮರೆತು, ಲಾಭ ತೋರಿಸದೆ, ಹಾನಿ ತೋರಿಸುವವರಿಗೆ ಏನನ್ನಬೇಕು. ಹಾಗಾದರೆ ಯಾರಿದ್ದಾರು? ರೈತರ ಉದ್ಧಾರಕರು ?

*

## ಧರ್ಮಪ್ರಭೆಯನ್ನು ಬೆಳಗಿಸಿದ ಜಗತ್ತಿನ ವಿಭೂತಿಪುರುಷರು

### ಸ್ವಾಮಿ ವಿವೇಕಾನಂದರು

ಸ್ವಾಮಿ ವಿವೇಕಾನಂದರ ಮೊದಲ ಹೆಸರು ನರೇಂದ್ರನಾಥದತ್ತ. ಕಾಲೇಜಿನಲ್ಲಿದ್ದಾಗ ಉಲ್ಲಾಸಭರಿತ, ಆಟದ ಬುದ್ಧಿಯ, ಜ್ಞಾನಾರ್ಜನೆಯ ಹಂಬಲವಿದ್ದ ಪ್ರತಿಭಾಶಾಲಿ ತರುಣನೆನಿಸಿದ್ದರು. ತತ್ವ-ಅಭ್ಯಾಸ ಎರಡೂ ಸಮರಸವಾಗಿದ್ದ ನಿಜವಾದ ವೇದಾಂತಿ. ಪೌರ್ವಾತ್ಯ-ಪಾಶ್ಚಾತ್ಯ ತತ್ವಶಾಸ್ತ್ರಗಳೆಲ್ಲವನ್ನೂ ಓದಿ ಬ್ರಹ್ಮ ಸಮಾಜವನ್ನು ಸೇರಿ, ಅದರಿಂದ ತೃಪ್ತಿ-ಶಾಂತಿ ಸಿಗದಿದ್ದಾಗ ಶ್ರೀ ರಾಮಕೃಷ್ಣ ಪರಮಹಂಸರನ್ನು ಭೇಟಿ ಮಾಡಿ, ಅವರ ಸಂನ್ಯಾಸಿ ಶಿಷ್ಯರಾದರು. ಗುರುಗಳ ಮರಣಾನಂತರ ಶಿಷ್ಯರನ್ನೆಲ್ಲ ಒಗ್ಗೂಡಿಸಿ, ಗುರುಗಳ ಅತ್ಯುತ್ತಮವಾದ ಪ್ರಾಯೋಗಿಕ ಧರ್ಮ ಜೀವನವನ್ನು, ಅಮೆರಿಕ, ಯುರೋಪ್, ಭಾರತಗಳಲ್ಲಿ ಹರಡುವಂತೆ ಮಾಡಿದರು. ಗುರುಗಳ ಆದರ್ಶಗಳ ಪ್ರಚಾರಕ್ಕಾಗಿ ನೂರಾರು ಗ್ರಂಥಗಳನ್ನು ಬರೆದರು. ಮೋಕ್ಷ, ತ್ಯಾಗ, ಸೇವೆ, ರಾಷ್ಟ್ರಭಕ್ತಿ, ಕರ್ಮನಿಷ್ಠೆ, ಆತ್ಮವಿಶ್ವಾಸ, ವಿಶ್ವ ಬಂಧುತ್ವ, ಪರಧರ್ಮ ಸಹಿಷ್ಣುತೆ ಮುಂತಾದುವನ್ನು ಕಲಿಸಿ ಬೆಳೆಸುವ ರಾಮಕೃಷ್ಣಮಠ-ಆಶ್ರಮಗಳನ್ನು ಪ್ರಪಂಚದ ನಾನಾ ದೇಶಗಳಲ್ಲಿ ಸ್ಥಾಪಿಸಿ, ಅವುಗಳ ಮೂಲಕ ಬಡವ, ರೋಗಿ, ಅನಾಥ, ಪೀಡಿತ, ಅಜ್ಞಾನಿ ಆದ ಜನರ ಸೇವೆಗೆ ಅನುಕೂಲ ಅವಕಾಶಗಳನ್ನು ಕಲ್ಪಿಸಿ, ಬೌದ್ಧಿಕ, ಆರ್ಥಿಕ, ಸಾಮಾಜಿಕ ರಂಗಗಳಲ್ಲಿ ಕ್ರಾಂತಿ ಎಬ್ಬಿಸಿದ ದೇಶಪ್ರೇಮಿ.

ಅಮೆರಿಕದ ಚಿಕಾಗೊ ನಗರದಲ್ಲಿ 1893ರಲ್ಲಿ ಜರುಗಿದ ವಿಶ್ವಧರ್ಮಗಳ ಸಮ್ಮೇಳನದಲ್ಲಿ ತಮ್ಮ ಭಾಷಣ ನಡತೆಗಳಿಂದ ಪಶ್ಚಿಮದ ಸೂರ್ಯನೆನಿಸಿ ಭಾರತೀತ ಧರ್ಮ-ಸಂಸ್ಕೃತಿಗಳನ್ನು ಮೇಲಕ್ಕೆ ಎತ್ತಿಹಿಡಿದರು. ಅಮೆರಿಕ, ಯುರೋಪ್, ಏಷ್ಯಗಳಲ್ಲಿ ಸಂಘ-ಸಂಸ್ಥೆ, ತರಗತಿಗಳಲ್ಲಿ ಉಪನ್ಯಾಸ ಮಾಡಿ ವಿದ್ವಾಂಸರೊಡನೆ ಚರ್ಚಿಸಿದರು. ಜನರ ಮನಸ್ಸಿನಲ್ಲಿ ಮಾನವತೆಯನ್ನು ಸೃಷ್ಟಿಸುವುದೇ ಮತಗಳೆಲ್ಲದರ ಗುರಿ. ವಿಮರ್ಶೆ ಮಾಡದೆ ಯಾವುದನ್ನೂ ನಂಬಬಾರದು ಎಂದು ಒತ್ತಿ ಹೇಳಿದರು. ಪ್ರತಿಧರ್ಮದವರೂ ತಮ್ಮ ವ್ಯಕ್ತಿತ್ವವನ್ನು ಕಾಪಾಡಿಕೊಂಡು, ತಮ್ಮ ಧರ್ಮದ ಏಳಿಗೆಯ ನಿಯಮವನ್ನು ಪಾಲಿಸಿ, ಇನ್ನೊಂದು ಧರ್ಮದ ತಿರುಳನ್ನು ತಿಳಿದುಕೊಳ್ಳಬೇಕು ಎಂದರು.

ಭಾರತೀಯರಿಗೆ ಅವರಲ್ಲಿದ್ದ ಲೋಪದೋಷಗಳನ್ನು ತೋರಿಸಿಕೊಟ್ಟು, ಅವರು ವಿಶಾಲದೃಷ್ಟಿ, ವಿಶ್ವಭಾವನೆಗಳನ್ನು ಮತ್ತೆ ಬೆಳೆಸಿಕೊಳ್ಳಬೇಕು. ಪಾಶ್ಚಾತ್ಯ ಸಂಪ್ರದಾಯ ಹಾಗೂ ಸಮಾಜ ವ್ಯವಸ್ಥೆಗಳ ಅನುಕರಣ ಮಾಡಬಾರದು, ಕೇವಲ ಗತಕಾಲವೈಭವವನ್ನು ಮೆಲ್ಲುತ್ತಿರುವ ಜನಾಂಗವಾಗಿ ಉಳಿಯದೆ, ಉಜ್ವಲ ಭವಿಷ್ಯದ ಅರುಣೋದಯಕ್ಕೆ ಟೊಂಕಕಟ್ಟಿ ನಿಲ್ಲಬೇಕು, ಸಾಮಾನ್ಯ ಜನತೆಯ ಹಿತಚಿಂತನೆ, ಉತ್ತಮ ಶಿಕ್ಷಣದ ಮೂಲಕ ಉನ್ನತಿ, ಸ್ತ್ರೀಯರಿಗೆ ಗೌರವ- ಸ್ವಾತಂತ್ರ್ಯ ಸುವ್ಯವಸ್ಥಿತ ಸಂಘ ಸಂಸ್ಥೆಗಳು, ಆರ್ಥಿಕ ಶಕ್ತಿಯ ಹೆಚ್ಚಳ- ಇವು ಭಾರತೀಯರಿಗೆ ಅವಶ್ಯ ಎಂದು ಹೇಳಿ, ಆತ್ಮಶ್ರದ್ಧೆ, ದೇಶಭಕ್ತಿ, ದೇಶ ಪ್ರೇಮಗಳ ಬಗ್ಗೆ ಕಿಡಿ ಕಾರುವಂತಹ ಭಾಷೆಯಲ್ಲಿ ಕಾಶ್ಮೀರದಿಂದ ಕನ್ಯಾಕುಮಾರಿರವರೆಗೆ ಪ್ರವಾಸ ಮಾಡಿ ಉಪದೇಶ ಮಾಡಿದರು. ತಮ್ಮ ಉಪನ್ಯಾಸಗಳ ಮೂಲಕ ಭಾರತೀಯರ ಜೀವನದಲ್ಲಿ ಬೇರೂರಿ ನೆಲೆಸಿದ್ದ ಅಂಧಶ್ರದ್ಧೆ, ಅವಿವೇಕ, ಅನ್ಯಾಯ, ಪ್ರವೃತ್ತಿಗಳನ್ನೆಲ್ಲ ಖಂಡಿಸಿ ಭಾರತೀಯ ಸಾಮಾಜಿಕ, ಆಧ್ಯಾತ್ಮಿಕ ಜೀವನವನ್ನು ಸುಧಾರಿಸಲೆತ್ನಿಸಿದರು.

ಲಂಡನ್‌ನಲ್ಲಿದ್ದಾಗ ಪೌರ್ವಾತ್ಯ ಸಂಸ್ಕೃತಿ ಪ್ರವೀಣ ಮ್ಯಾಕ್ಸ್ ಮುಲ್ಲರ್ ಜೊತೆ ಮಾತುಕತೆ ನಡೆಸಿ ಅವರ ಅಭಿಮಾನಕ್ಕೆ ಪಾತ್ರರಾಗಿದ್ದರು. ಅನಿಬೆಸೆಂಟರು ಭಾರತಕ್ಕೆ ಮಾಡಿದ ಒಳಿತಿಗಾಗಿ ಅವರ ಬಗ್ಗೆ ಗೌರವ ಹೊಂದಿದ್ದರು. ಟಾಲ್‌ಸ್ಟಾಯ್‌ರವರನ್ನು ಅವರ ಊರಿನಲ್ಲಿ ಭೇಟಿ ಮಾಡಲು ನಿಶ್ಚಯಿಸಿದ್ದರೂ, ಈ ಇಬ್ಬರು ಮಹಾತ್ಮರ ಭೇಟಿ ಆಗಲಿಲ್ಲ.

ದರಿದ್ರ ನಾರಾಯಣರ ಏಳಿಗೆಗಾಗಿ ದುಡಿಯುವುದೇ ಮುಖ್ಯ, ರಾಜಕೀಯ, ಆರ್ಥಿಕ, ಔದ್ಯೋಗಿಕ, ವ್ಯಾಪಾರ, ವ್ಯವಹಾರ ಎಲ್ಲವೂ ಧರ್ಮಕ್ಕೆ ಅಧೀನವಾಗಿರಲೇಬೇಕು. ಎಂಬುವ ವಿಷಯದಲ್ಲಿ ಸ್ವಾಮಿ ವಿವೇಕಾನಂದರು ಮಹಾತ್ಮ ಗಾಂಧಿಯವರ ಆಗಮನದ ಮುನ್ಸೂಚಕರಾಗಿದ್ದರು. *

– ಹೆಚ್.ಜಿ. ರಾಮಯ್ಯಂಗಾರ್, ಬೆಂಗಳೂರು-೯.





## ಶ್ರೀ ಸಿದ್ಧಗಂಗಾ ಮಠದ ಹಿರಿಯ ಹಳೆಯ ವಿದ್ಯಾರ್ಥಿಗಳು ಮತ್ತು ಹಿತೈಷಿಗಳ ಸಂಘದ ಹೆಮ್ಮೆಯ ರಾಷ್ಟ್ರಕವಿ ಜಿ.ಎಸ್. ಶಿವರುದ್ರಪ್ಪನವರಿಗೆ ನೃಪತುಂಗ ಪ್ರಶಸ್ತಿಯ ಗರಿ



ಶ್ರೀಮಠದ ಹಿರಿಯ ವಿದ್ಯಾರ್ಥಿಗಳೂ, ರಾಷ್ಟ್ರಕವಿ ಗಳೂ ಆದ ಡಾ॥ ಜಿ.ಎಸ್. ಶಿವರುದ್ರಪ್ಪನವರು ೨೦೦೮ನೇ ಸಾಲಿನ 'ನೃಪತುಂಗ ಪ್ರಶಸ್ತಿ'ಗಾಗಿ ಆಯ್ಕೆಯಾಗಿರುವುದನ್ನು ತಿಳಿದು 'ಸಿದ್ಧಗಂಗಾ' ಅಭಿನಂದನೆಗಳನ್ನು ಸಲ್ಲಿಸಲು ಸಂತೋಷಿಸುತ್ತದೆ. ಶ್ರೀಯುತರನ್ನು ಆಯ್ಕೆ ಮಾಡಿ ಗೌರವಿಸಿದ ಆಯ್ಕೆ ಸಮಿತಿಯ ಸದಸ್ಯರೆಲ್ಲರಿಗೆ ವಂದನೆಗಳನ್ನು ಸಲ್ಲಿಸುತ್ತದೆ.

ಡಾ॥ ಜಿ.ಎಸ್. ಶಿವರುದ್ರಪ್ಪನವರು ೦೭-೦೨-೧೯೨೬ರಂದು ಶಿವಮೊಗ್ಗ ಜಿಲ್ಲೆ ಷಿಕಾರಿಪುರದಲ್ಲಿ ಜನಿಸಿದರು. ಶ್ರೀಮಠ ಸಿದ್ಧಗಂಗಾದಲ್ಲಿ ಮೂರು ವರ್ಷಗಳ ಕಾಲ ವಿದ್ಯಾರ್ಥಿಯಾಗಿದ್ದು ತುಮಕೂರಿನ ಸರ್ಕಾರಿ ಪ್ರಥಮ ದರ್ಜೆ ಕಾಲೇಜಿನಲ್ಲಿ ವ್ಯಾಸಂಗ ಮಾಡಿ ಆನಂತರ ಮೈಸೂರು ಮಹಾರಾಜಾ ಕಾಲೇಜಿನಲ್ಲಿ ಬಿ.ಎ. (ಆನರ್ಸ್), ಎಂ.ಎ. ಹಾಗೂ ಪಿ.ಎಚ್.ಡಿ. ಪದವಿಗಳಿಸಿ, ಅಧ್ಯಾಪಕರಾಗಿ ವೃತ್ತಿ ಜೀವನ ವನ್ನಾರಂಭಿಸಿದರು. ಉಸ್ಮಾನಿಯ ವಿಶ್ವವಿದ್ಯಾಲಯ, ಬೆಂಗಳೂರು ವಿಶ್ವವಿದ್ಯಾಲಯಗಳಲ್ಲಿ ಕನ್ನಡ ವಿಭಾಗಗಳ ಮುಖ್ಯಸ್ಥರಾಗಿ ಆ ವಿಭಾಗಗಳಿಗೆ ಘನತೆ ಗೌರವಗಳನ್ನು ತಂದುಕೊಟ್ಟರು. ಸಾವಿರಾರು ಪ್ರತಿಭಾವಂತ ಪ್ರಾಧ್ಯಾಪಕರುಗಳನ್ನು ರೂಪಿಸಿದರು. ಕನ್ನಡ ಸಾಹಿತ್ಯ ಅಕಾಡೆಮಿಯ ಅಧ್ಯಕ್ಷರಾಗಿ ಸೇವೆ ಸಲ್ಲಿಸಿದರು. ಕವಿ, ವಿಮರ್ಶಕ, ಸಂಯೋಜಕ, ಸಂಘಟಕ, ಸುಸಂಸ್ಕೃತ ಪ್ರಜ್ಞಾಶೀಲರಾದ ಡಾ॥ ಜಿ.ಎಸ್.ಎಸ್. ಸೌಂದರ್ಯ ಸಮೀಕ್ಷೆ, ವಿಮರ್ಶೆಯ ಪೂರ್ವಪಶ್ಚಿಮ, ಗತಿಬಿಂಬ, ಪರಿಶೀಲನ, ಅನುರಣನ, ಬೆಡಗು, ಕಾವ್ಯಾರ್ಥ ಚಿಂತನ-ವಿಮರ್ಶಾ ಕೃತಿಗಳನ್ನು ರಚಿಸಿದ್ದಾರೆ. ಸಾಮಗಾನ, ಚೆಲುವು ಒಲವು, ದೀಪದಹೆಜ್ಜೆ, ಅನಾವರಣ, ದೇವಶಿಲ್ಪ, ಕಾರ್ತೀಕ, ಗೋಡೆ, ಪ್ರಗತಿ, ಪ್ರೀತಿಇಲ್ಲದಮೇಲೆ ಮುಂತಾದ ಕವನ ಸಂಕಲನಗಳನ್ನು ನೀಡಿದ್ದಾರೆ. ಮಾಸ್ಕೋದಲ್ಲಿ ಇಪ್ಪತ್ತೆರಡು ದಿನ, ಗಂಗೆಯ ಶಿಖರಗಳಲ್ಲಿ, ಅಮೆರಿಕಾದಲ್ಲಿ ಕನ್ನಡಿಗ ಪ್ರವಾಸ ಕಥನಗಳನ್ನು ಕೊಟ್ಟಿದ್ದಾರೆ. ಕರ್ಮಯೋಗಿ ಸಿದ್ಧರಾಮ ಜೀವನ ಚರಿತ್ರೆ, ಚತುರಂಗ ಆತ್ಮಕಥನವನ್ನು ಬರೆದಿದ್ದಾರೆ.

ರಾಷ್ಟ್ರಕವಿ, ಪಂಪಪ್ರಶಸ್ತಿ, ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ೬೧ನೆಯ ಕನ್ನಡ ಸಾಹಿತ್ಯ ಸಮ್ಮೇಳನ ಅಧ್ಯಕ್ಷತೆ, ಸಿದ್ಧಗಂಗಾ ಶ್ರೀ ಪ್ರಶಸ್ತಿ ಪುರಸ್ಕೃತರಾಗಿದ್ದಾರೆ. ಇದೀಗ ನೃಪತುಂಗ ಪ್ರಶಸ್ತಿ ಗೌರವದ ಗರಿ ಅವರದಾಗಿದೆ. ಅಭಿನಂದನೆಗಳು.

### ಕಾವ್ಯಕೃಪೆ

ಹೃದಯಾಂತರಾಳದಲಿ ಹುದುಗಿ ಹೊಮ್ಮುವ ನೋವ
ಬಡನುಡಿಯಲೆಂತಡಕಿ ತೋರಬಹುದು?
ಆಂತರಿಕ ಶ್ರೀಮಂತದನುಭವದ ಸಾರವನು
ಸಾಂತ ಭಾಷೆಯೊಳೆಂತು ಹಿಡಿಯಬಹುದು ?

ಅಂತರಂಗದನಂತ ಶ್ರೀಮಂತಲೋಕದಲಿ
ಜಗದ ಶ್ರೀಮಂತಿಕೆಯ ಸವಿಯಬಹುದು.
ತೊದಲು ನುಡಿವಣುಗನೊಲು ಕವಿಜೀವ ನೋಯುತ್ತ
ದಿನದಿನವು ತಪಿಸುತ್ತ ಕೊರಗುತಿಹುದು.

ಹೇಗೋ ಏನೋ ಎಂತೊ ಒಳದನಿಯ ಹೊಮ್ಮಿಸುವೆ
ಕಾವ್ಯಕೃಪೆಗೆನ್ನೆದೆಯು ಮಣಿಯುತಿಹುದು
ಇನಿತಾದರೂ ಇಂಥ ಶಕ್ತಿಯನು ವ್ಯಕ್ತಿಯಲಿ
ಕೃಪೆಗೈದ ಶಕ್ತಿಗಿದು ನಮಿಸುತಿಹುದು.

– ಜಿ.ಎಸ್.ಎಸ್.

ಪೂಜ್ಯ ಶ್ರೀ ಶ್ರೀಗಳವರು ನವೆಂಬರ್ 4ರಂದು ಮಾಗಡಿ ತಾಲ್ಲೂಕು ಬ್ಯಾಲಕೆರೆಯಲ್ಲಿ ಲಿಂಗೈಕ್ಯ ಶರಣೆ ಸರ್ವಮಂಗಳಮ್ಮ ರುದ್ರಯ್ಯ ಅವರ ಸ್ಮರಣಾರ್ಥವಾಗಿ ಏರ್ಪಡಿಸಿದ್ದ ಶರಣ ಮೇಳದ ದಿವ್ಯಸಾನ್ನಿಧ್ಯ ವಹಿಸಿ ಪ್ರಸಾದವಾಣಿ ದಯ ಪಾಲಿಸುತ್ತಾ 'ರೋಮ್ ಹತ್ತಿ ಉರಿಯುತ್ತಿರುವಾಗ ಚಕ್ರವರ್ತಿ ನೀರೊ ಪಿಟೀಲು ನುಡಿಸುತ್ತಿದ್ದನಂತೆ. ಅದೇ ಪರಿಸ್ಥಿತಿ ಇಂದು ರಾಜ್ಯಕ್ಕೆ ಬಂದೊದಗಿದೆ. ಉತ್ತರ ಕರ್ನಾಟಕದಲ್ಲಿ ಉಂಟಾದ ಅತಿ ವೃಷ್ಟಿಯಿಂದ ಜನತೆ ಅನ್ನ ನೀರು ಇಲ್ಲದೆ, ನೆಲೆ ನಿಲ್ಲಲು ಸೂರಿಲ್ಲದೆ ನಲುಗುತ್ತಿದ್ದಾರೆ. ಇಂಥ ವಿಷಮ ಪರಿಸ್ಥಿತಿಯಲ್ಲಿ ರಾಜ್ಯ ಆಳುತ್ತಿರುವವರು ರಾಜಕೀಯ ದೊಂಬರಾಟ ನಡೆಸುತ್ತಿರುವುದು ನಾಚಿಕೇಗೇಡು ಎಂದು ಶ್ರೀ ಸಿದ್ಧಗಂಗಾ ಕ್ಷೇತ್ರಾಧ್ಯಕ್ಷರಾದ ಪರಮಪೂಜ್ಯ ಡಾ|| ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರು ನೊಂದು ನುಡಿದರು.

ಶರಣ ಮೇಳವನ್ನು ಜ್ಯೋತಿ ಬೆಳಗಿಸಿ ಉದ್ಘಾಟಿಸಿದ ಕಂಚುಗಲ್ ಬಂಡೇಮಠದ ಪೂಜ್ಯ ಶ್ರೀ ಶ್ರೀ ಬಸವಲಿಂಗ ಸ್ವಾಮಿಗಳು ಇಂತಹ ಶರಣ ಮೇಳಗಳು ಜನರಲ್ಲಿ ಅರಿವನ್ನು ಮೂಡಿಸಲು ಸಹಾಯವಾಗುತ್ತಿದೆ. ಲಿಂಗೈಕ್ಯ ಶರಣೆ ಸರ್ವಮಂಗಳಮ್ಮ ಅವರ ಮಕ್ಕಳು ಶರಣ ಮೇಳವನ್ನು ವ್ಯವಸ್ಥೆ ಮಾಡುವುದರ ಮೂಲಕ ಇತರರಿಗೆ ಅನುಕರಣೀಯವಾಗಿದ್ದಾರೆ ಎಂದು ನುಡಿದರು.

ಜಾನಪದ ವಿದ್ವಾಂಸರೂ, ಸಿದ್ಧಗಂಗಾ ಮಾಸಪತ್ರಿಕೆಯ ಸಹ ಸಂಪಾದಕರೂ ಆದ ಶ್ರೀ ಎಚ್.ಎಸ್. ಸಿದ್ಧಗಂಗಪ್ಪ ಅವರು ಸಂಪಾದಿಸಿದ 'ಜ್ಯೋತಿ ನಿನ್ನಾರು ಹೋಲ್ಯಾರ' ಕೃತಿಯನ್ನು ಜಾನಪದ ಸಾಹಿತಿಗಳು, ಸಿದ್ಧಗಂಗಾ ಮಾಸ ಪತ್ರಿಕೆಯ ಸಂಪಾದಕರಾದ ಪ್ರೊ.ಹೆಚ್.ವಿ. ವೀರಭದ್ರಯ್ಯನವರು ಬಿಡುಗಡೆ ಮಾಡಿದರು.

ಹಿರಿಯ ಕೆ.ಎ.ಎಸ್. ಅಧಿಕಾರಿಗಳಾದ ಶ್ರೀ ಎಂ.ಎಸ್. ನಾಗೇಂದ್ರ ಅವರು ನುಡಿ ನಮನಗಳನ್ನು ಸಲ್ಲಿಸಿದರು.

ಅಧ್ಯಕ್ಷತೆ ವಹಿಸಿದ್ದ ಗದ್ದುಗೆ ಮಠದ ಕ್ಷೇತ್ರಾಧ್ಯಕ್ಷರಾದ ಪೂಜ್ಯ ಶ್ರೀ ಶ್ರೀ ಮಹಾಂತಸ್ವಾಮಿಗಳು ಮತ್ತು ಶಿವಗಂಗೆಯ ಮೇಲಣಗವಿ ಸಂಸ್ಥಾನ ಮಠದ ಷ.ಬ್ರ.ಶ್ರೀ. ಮಲಯ ಶಾಂತಮುನಿ ಶಿವಾಚಾರ್ಯಸ್ವಾಮಿಗಳು ನುಡಿಸಂದೇಶವನ್ನು ನೀಡಿ ಲಿಂಗೈಕ್ಯ ಶರಣೆ ಸರ್ವಮಂಗಳಮ್ಮ ರುದ್ರಯ್ಯನವರ ತ್ಯಾಗ, ಅನುಕಂಪ, ಸೌಹಾರ್ದತೆ, ಸಹನಾ ಗುಣಶೀಲಗಳನ್ನು ಸ್ಮರಿಸಿದರು. ಸಮಾರಂಭದಲ್ಲಿ ವಿವಿಧ ಮಠಗಳ ಹರಗುರು ಚರಮೂರ್ತಿ ಗಳು ಉಪಸ್ಥಿತರಿದ್ದರು.

ಈ ಸಮಾರಂಭದ ಸ್ಮರಣಾರ್ಥ ಶ್ರೀಮಠದ ದಾಸೋಹ ನಿಧಿಗೆ 25 ಸಾವಿರ ರೂಗಳ ಹಾಗೂ ಉತ್ತರ ಕರ್ನಾಟಕದ ನೆರೆ ಸಂತ್ರಸ್ತರ ಪರಿಹಾರ ನಿಧಿಗೆ 10 ಸಾವಿರ ರೂಗಳ ಕೊಡುಗೆಯನ್ನು ಪರಮಪೂಜ್ಯ ಶ್ರೀ ಶ್ರೀಗಳವರಿಗೆ ಅರ್ಪಿಸಲಾಯಿತು. ಇದೇ ಸಂದರ್ಭದಲ್ಲಿ ಬ್ಯಾಲಕೆರೆಯ ಪಟೇಲ್ ಶಿವಣ್ಣ ಅವರು ನೆರೆ ಸಂತ್ರಸ್ತರ ಪರಿಹಾರ ನಿಧಿಗೆ 5 ಸಾವಿರ ರೂಗಳ ಕೊಡುಗೆಯನ್ನು ನೀಡಿದರು.

ಶ್ರೀ ಜಗದೀಶ ಅವರ ಪ್ರಾರ್ಥನೆಯೊಂದಿಗೆ ಕಾರ್ಯಕ್ರಮ ಆರಂಭವಾಯಿತು. ಶ್ರೀ ಎಚ್.ಎಸ್. ಸಿದ್ಧಗಂಗಪ್ಪ ಅವರು ಸ್ವಾಗತಿಸಿದರು. ಶ್ರೀ ರಾಜಣ್ಣ ಅವರು ಶರಣ ಸಮರ್ಪಣೆ ಸಲ್ಲಿಸಿದರು. ಕಾರ್ಯಕ್ರಮವನ್ನು ಶ್ರೀ ರೇವಣಸಿದ್ಧಪ್ಪ ಅವರು ನಡೆಸಿಕೊಟ್ಟರು. ಶರಣ ಮೇಳದ ಅಂಗವಾಗಿ ಶ್ರೀಮಠದ ಕಲಾವಿದರಿಂದ 'ಶ್ರೀ ಜಗಜ್ಜ್ಯೋತಿ ಬಸವೇಶ್ವರ' ನಾಟಕ ಪ್ರದರ್ಶನ ನಡೆಯಿತು. ಸುತ್ತಮುತ್ತಲಿನ ಗ್ರಾಮಗಳಿಂದ ಬಂದ ಸಾವಿರಾರು ಜನ ನಾಟಕವನ್ನು ವೀಕ್ಷಿಸಿದರು.





## ಅಕ್ಕರೆ

-ಕೆ.ಜಿ. ರಂಗಯ್ಯ *

### ಚಿಮ್ಮುವ ಚಿಲುಮೆಗಳಿಗೆ ಸ್ಫೂರ್ತಿಯ ಸೆಲೆ ಶ್ರೀ ಶ್ರೀಗಳವರು

ಮಠದಲ್ಲಿನ ಸಂಜೆಯ ಶ್ರಮದಾನದಿಂದಾಗಿ ಅಣ್ಣನ ದುಡಿದುಣ್ಣಬೇಕೆಂಬ ಮಂತ್ರ 'ಕಾಯಕವೇ ಕೈಲಾಸ'ಕ್ಕೆ ನಮಗೆಲ್ಲಾ ಪ್ರೇರಣೆ ದೊರೆತು ಸೋಮಾರಿತನ ದೂರವಾಗಲು ಕಾರಣವಾಯಿತೆಂದೇ ನಾನು ಭಾವಿಸುತ್ತೇನೆ. ಶಾಲೆಯ ರಜಾದಿನಗಳಲ್ಲಿ ಮಠದಲ್ಲಿಯೇ ಉಳಿಯುತ್ತಿದ್ದ ನನ್ನಂತಹ ನೂರಾರು ಬಡಮಕ್ಕಳಿಗೆ ಶ್ರೀಮಠಕ್ಕೆ ಸಾಂಕೇತಿಕವಾಗಿ ಸಲ್ಲಿಸಬೇಕಾಗುತ್ತಿದ್ದ ಅಲ್ಪಾತಿಅಲ್ಪ ಶುಲ್ಕದಲ್ಲೂ ಸಂಪೂರ್ಣ ರಿಯಾಯಿತಿ ದೊರೆಯುತ್ತಿತ್ತು. ಬೇಸಿಗೆ ರಜೆಗಳಲ್ಲಿ ಮೂರು ಹೊತ್ತು ಉಂಡು ಆರು ಹೊತ್ತು ಆಟವಾಡಿಕೊಂಡು ಶ್ರೀ ಶ್ರೀಗಳವರ ಮನಸ್ಸಿಗೆ ಇತರರೆಲ್ಲರಿಗಿಂತ ಹೆಚ್ಚು ಹತ್ತಿರವಾಗುತ್ತಿದ್ದ ನಮಗೆ ಎಲ್ಲಿಲ್ಲದ ಬಿಗುಮಾನ. ಬೆಳಗು ಮತ್ತು ಬೈಗು ಒಂದೊಂದು ಗಂಟೆ ಮಾತ್ರ ಆ ದಿನಗಳಲ್ಲಿ ನಿರಾಯಾಸದ ಕೆಲಸ. ನಂತರ ಮನದಣಿಯೆ ಈಜಿ, ತಣ್ಣೀರಿ ನಲ್ಲಿ ಮಿಂದು ಓದಿನಲ್ಲಿ ತೊಡಗುತ್ತಿದ್ದೆವು. ಕಾಲಕಾಲಕ್ಕೆ ಪುಷ್ಕಳ ಭೋಜನ, ಜೊತೆಗೆ ಪ್ರೀತಿಯ ಧಾರೆಯೆರೆಯುತ್ತಿದ್ದ ಶ್ರೀ ಶ್ರೀಗಳವರ ಸಾಮೀಪ್ಯ ಇಷ್ಟೆಲ್ಲಾ ಇರುವಾಗ ಮನೆಯ ನೆನಪೇಕೆ ಕಾಡುತ್ತದೆ? ಖಂಡಿತವಾಗಿಯೂ ನಮಗೆ ಅಪ್ಪ-ಅಮ್ಮ-ಬಂಧುಗಳು ಎಲ್ಲರೂ ಶ್ರೀ ಶ್ರೀಗಳವರೇ ಆಗಿದ್ದರು ಮಠದ ಮಹಾಮನೆಯೇ ಮನೆಯಾಗಿತ್ತು, ಊರು ನಮ್ಮಿಂದ ದೂರಾಗಿತ್ತು.

ಒಂದು ಬೇಸಿಗೆಯ ರಜೆಯಲ್ಲಿ ದೇವರಾಯಪಟ್ಟಣದ ಬಳಿಯಿರುವ ಮಠದ ಗದ್ದೆಯಲ್ಲಿಟ್ಟಿದ್ದ ಭತ್ತದ ಬೆಳೆ ಕಾಯಲು ನಾನು ಮತ್ತು ಇನ್ನಿಬ್ಬರು ಗೆಳೆಯರಾದ ಆರ್.ವೀರಣ್ಣ ಹಾಗೂ ಎನ್. ಗೋವಿಂದಯ್ಯ ನಿಯೋಜಿತರಾಗಿದ್ದೆವು. ಕಾವಲು ಎಂದರೆ ಕುಳಿತಿರುವ ಕೆಲಸ ತಾನೆ. ಸುಮ್ಮನೆ ಕೂತು ಕೂತು ಸಾಕಾಗಿ ಮಧ್ಯಾಹ್ನದ ಉರಿಬಿಸಿಲಿನಲ್ಲಿ ಅಲ್ಲಿನ ಹೊಂಡದಲ್ಲಿ ಬಿದ್ದು ಒದ್ದಾಡಿ ಈಜು ಕಲಿತೆವು. ಗದ್ದೆಗಳಿಗೆ ಗೂಡೆ ಹಾಕಿ ನೀರುಣಿಸಲು 2-3 ದಿನಗಳಿಗೊಮ್ಮೆ ಕಟ್ಟುಮಸ್ತಾದ ದೊಡ್ಡ ಹುಡುಗರು ನಾಲ್ಕೈದು ಮಂದಿ ನಮ್ಮ ಜೊತೆಗೆ ನಿಯೋಗಿತರಾಗುತ್ತಿದ್ದರು. ಅಂತಹ ಸಂದರ್ಭಗಳಲ್ಲೆಲ್ಲಾ ಮಧ್ಯಾಹ್ನದ ಎರಡನೇ ಊಟ ಅಲ್ಲಿಗೇ ಬರುತ್ತಿತ್ತು. ಶ್ರೀ ಶ್ರೀಗಳವರು ಆಗಾಗ್ಗೆ ಗದ್ದೆಗಳನ್ನು ನೋಡಲು ಬಂದು ಹೋಗುತ್ತಿದ್ದರು. ಒಂದು ದಿನ ಹಾಗೆ ಬಂದಿದ್ದಾಗ ನಮ್ಮ ಗೂಡೆಹಾಕುವ ಕಾಯಕ ಮಂದಗತಿಯಲ್ಲಿದ್ದುದನ್ನೂ ಗದ್ದೆಗಳಲ್ಲಿ ಸಾಕಷ್ಟು ನೀರು ಇಲ್ಲದ್ದನ್ನೂ ಗಮನಿಸಿ ನಮ್ಮ ನಡುವೆ ಸ್ಪರ್ಧೆಯೊಂದನ್ನು ಹುಟ್ಟು ಹಾಕಿದರು. ಒಂದು ಕಡೆ ಗೂಡೆಯ ಹಗ್ಗ ಹಿಡಿದು ತಾವೇ ಕುಳಿತುಕೊಳ್ಳುವುದೆಂತಲೂ ಉಳಿದವರು ಒಬ್ಬರಾದ ಮೇಲೊಬ್ಬರಂತೆ ಇನ್ನೊಂದು ಕಡೆ ಕಾರ್ಯಮಗ್ನರಾಗಬೇಕೆಂತಲೂ ಅಪ್ಪಣೆ ಕೊಡಿಸಿ ನಮ್ಮಲ್ಲಿ ಯಾರ್‍ಯಾರು ಎಷ್ಟೆಷ್ಟು ಹೊತ್ತು ಕೆಲಸ ನಿರ್ವಹಿಸುವುರೋ ಅದರ ಆಧಾರದ ಮೇಲೆ ಪಂದ್ಯಪುರುಷನನ್ನು ಆಯ್ಕೆ ಮಾಡಲಾಗುವುದೆಂತಲೂ ತೀರ್ಮನವಿತ್ತರು. ಸುಮಾರು 3 ಗಂಟೆಗೂ ಹೆಚ್ಚಿನ ಅವಧಿಯವರೆಗೆ ನಿರಂತರವಾಗಿ ಗೂಡೆಹಾಕಿ ನಮ್ಮ ತಂಡದ ಏಕೈಕ ಸ್ಪರ್ಧಿಗಳಾದ ತಾವು ಮಾತ್ರ ದಣಿವಿಗೆ ಮಣಿಯದೇ ಉಳಿದರು. ತಾವೇ ದೀರ್ಘಕಾಲದ ಅವಧಿಯವರೆಗೆ ಗೂಡೆ ಹಾಕಿದ್ದರೂ ಎದುರು ತಂಡದ ಅಂದರೆ ನಮ್ಮಲ್ಲಿನ ಅತಿ ದೀರ್ಘ ಅವಧಿಯ ವಿಜೇತನನ್ನು ಆರಿಸಿ ಆತನ ಬಗ್ಗೆ ಮೆಚ್ಚಿಗೆ ವ್ಯಕ್ತಪಡಿಸಿ ನಮಗೆಲ್ಲಾ ಸ್ಫೂರ್ತಿ ನೀಡಿ ಪ್ರೋತ್ಸಾಹಿಸಿದ್ದು ನಮಗೆ 'ಹಿಡಿದ ಕೆಲಸವನ್ನು ಬಿಡದೆ ಮಾಡಿ ಮುಗಿಸುವ' ಛಲವನ್ನು ರೂಢಿಸಿಕೊಳ್ಳುವಲ್ಲಿ ಪ್ರೇರಕಶಕ್ತಿಯಾಗಿದ್ದರೆಂಬುದರಲ್ಲಿ ಎರಡು ಮಾತಿಲ್ಲ. ಗದ್ದೆಗಳೆಲ್ಲಾ ಭರ್ತಿಯಾಗಿದ್ದರೂ ನೀರಿನ ಹೊಂಡವನ್ನು ಬರಿದಾಗಿಸಲು ನಮ್ಮಿಂದ ಸಾಧ್ಯವಾಗಿರಲಿಲ್ಲ. ಇದನ್ನು ಕಂಡ ನನಗೆ ಅಂದು ಅನ್ನಿಸಿದ್ದು 'ದೇವರ ಮುಂದೆ ಮಾನವನ ಆಟ ಏನೂ ಸಾಗದು' ಎಂದು. ಆ ಹೊಂಡದಲ್ಲಿ ಬೇಸಿಗೆಯಲ್ಲಿ ಮೊಗೆದಷ್ಟು ಮಿಗಿಲಾಗುತ್ತಿದ್ದ ಬತ್ತದ ನೀರಿನ ಸೆಲೆಯಿತ್ತು; ಆದರೆ ಈಗ? ಇಂತಹ ಪರಿಸ್ಥಿತಿಗೆ ಕಾರಣ? ಉತ್ತರ 'ಮಾನವನ ದುರಾಸೆಯ ಫಲ'. *

* ನಿವೃತ್ತ ಮುಖ್ಯಶಿಕ್ಷಕರು, ಕೆಂಕೆರೆಪಾಳ್ಯ, ಸುಗ್ಗನಹಳ್ಳಿ ಅಂಚೆ, ಮಾಗಡಿ ತಾ||, ರಾಮನಗರ ಜಿಲ್ಲೆ.

## ನೂತನ ಯೋಜನೆ

# ಶ್ರೀ ಸಿದ್ಧಗಂಗಾಮಠದಲ್ಲಿ ಉದ್ದೇಶಿತ ಸ್ವಚ್ಛತೆ ಹಾಗೂ ಒಳಚರಂಡಿ ವ್ಯವಸ್ಥೆ ಮತ್ತು ನಿರ್ವಹಣೆ : ಒಂದು ಮನವಿ

ಶ್ರೀ ಸಿದ್ಧಗಂಗಾ ಮಠವು ಕನ್ನಡನಾಡಿನ ಹೆಮ್ಮೆಯ ಧಾರ್ಮಿಕ ಆಧ್ಯಾತ್ಮಿಕ ಕ್ಷೇತ್ರ. ಇದಲ್ಲದೇ ಶ್ರೀಮಠವು ಸಾಮಾಜಿಕವಾಗಿ, ಶೈಕ್ಷಣಿಕವಾಗಿ ಹಾಗೂ ಧಾರ್ಮಿಕವಾಗಿ ನಾಡಿನ ಜನತೆಯ ಸೇವೆಯಲ್ಲಿ ಸಂಪೂರ್ಣವಾಗಿ ತೊಡಗಿಸಿಕೊಂಡಿದೆ. ಹನ್ನೆರಡನೆಯ ಶತಮಾನದ ಶ್ರೀ ಬಸವೇಶ್ವರರು ಕಾಯಕ ಮತ್ತು ದಾಸೋಹ, ಅಂಧಶ್ರದ್ಧೆ, ಜಾತಿಜಾತಿಗಳ ಹಾಗೂ ಮಹಿಳೆಯವರ ಬಗ್ಗೆ ಇದ್ದ ಅಸಮಾನತೆಯ ವಿರುದ್ಧ ನಡೆಸಿದ ಸಾಮಾಜಿಕ ಕ್ರಾಂತಿ ಹಾಗೂ ಪ್ರತಿಪಾದಿಸಿದ ತತ್ತ್ವಗಳು ಶ್ರೀಕ್ಷೇತ್ರದಲ್ಲಿ ಸಾಕಾರಗೊಳ್ಳುತ್ತಿರುವುದು ಎಲ್ಲರಿಗೂ ತಿಳಿದ ವಿಷಯವೇ ಆಗಿದೆ.

ಪರಮಪೂಜ್ಯ ಡಾ॥ ಶ್ರೀ ಶ್ರೀ ಶಿವಕುಮಾರಮಹಾಸ್ವಾಮಿಗಳು ಸುಮಾರು ೯೦೦೦ ಸಾವಿರ ದೀನ, ದಲಿತ, ಹಿಂದುಳಿದ ಬಡವಿದ್ಯಾರ್ಥಿಗಳಿಗೆ ವರ್ಗಭೇದವಿಲ್ಲದೆ ಅನ್ನ, ವಸತಿ ಹಾಗೂ ವಿದ್ಯಾಭ್ಯಾಸವನ್ನು ಉಚಿತವಾಗಿ ನೀಡುತ್ತಿದ್ದಾರೆ. ಇದಲ್ಲದೆ ದಿನನಿತ್ಯ ಸುಮಾರು ೨ ರಿಂದ ೩ ಸಾವಿರ ಭಕ್ತಾದಿಗಳು ಮತ್ತು ಅಭಿಮಾನಿಗಳು ಶ್ರೀಗಳವರ ಆಶೀರ್ವಾದ ಪಡೆಯಲು ಬಂದು ಹೋಗುತ್ತಿರುತ್ತಾರೆ. ಹಬ್ಬ-ಹರಿದಿನ ಮತ್ತು ಜಾತ್ರೆಯ ಕಾಲದಲ್ಲಿ ಅಸಂಖ್ಯಾತ ಭಕ್ತರು ಭೇಟಿ ನೀಡುತ್ತಾರೆ. ಪ್ರತಿದಿನ ವಿದ್ಯಾರ್ಥಿಗಳ, ಸಿಬ್ಬಂದಿ ವರ್ಗದ ಮತ್ತು ಬಂದು ಹೋಗುವ ಭಕ್ತಾದಿಗಳಿಗೆ ಊಟ, ವಸತಿ ಮತ್ತು ಇತರ ಮೂಲಭೂತ ಸೌಕರ್ಯಗಳನ್ನು ಒದಗಿಸಲು ಶ್ರೀಮಠವು ಶಕ್ತಿಮೀರಿ ಶ್ರಮಿಸುತ್ತಿದೆ. ಆದರೂ ಈ ದಿಸೆಯಲ್ಲಿ ಇನ್ನೂ ಅನೇಕ ಮೂಲಭೂತ ಸೌಕರ್ಯಗಳ ಕೊರತೆಯಿದ್ದು ಅವುಗಳನ್ನು ತೃಪ್ತಿಕರವಾಗಿ ಮಾರ್ಪಾಟು ಮಾಡಿಕೊಳ್ಳಬೇಕಾಗಿದೆ. ಇದರಲ್ಲಿ ಸ್ವಚ್ಛತೆ ಮತ್ತು ಒಳಚರಂಡಿ ವ್ಯವಸ್ಥೆ ಅತ್ಯಂತ ಪ್ರಮುಖವಾದುದು. ಪ್ರಸ್ತುತ ಇರುವ ವ್ಯವಸ್ಥೆ ಅಗತ್ಯಗಳನ್ನು ಪೂರೈಸಲಾಗುತ್ತಿಲ್ಲ. ಇವುಗಳ ಸೂಕ್ತ ನಿರ್ವಹಣೆಗೆ ಯೋಜನೆ ರೂಪಿಸಿ ಈ ಕೂಡಲೇ ಕಾರ್ಯಪ್ರವೃತ್ತರಾಗಬೇಕಾಗಿದೆ.

ಇದರ ಅವಶ್ಯಕತೆಯನ್ನು ಅರಿತು ಶ್ರೀಮಠದ ಹಳೆ ವಿದ್ಯಾರ್ಥಿ ಮತ್ತು ಹಿತೈಷಿಗಳ ಸಂಘದ ಕಾರ್ಯಕಾರಿ ಸಮಿತಿ ದಿನಾಂಕ ೧೨-೦೭-೨೦೦೯ ಮತ್ತು ೧೫-೧೦-೨೦೦೯ ರಂದು ಸಭೆ ಸೇರಿ ಸುದೀರ್ಘವಾಗಿ ಚರ್ಚಿಸಿ ಈ ಕೆಳಕಂಡ ನಿರ್ಣಯಗಳನ್ನು ಅಂಗೀಕರಿಸಲಾಗಿದೆ.

೧. ಶ್ರೀಕ್ಷೇತ್ರದ ಸಂಪೂರ್ಣ ಆವರಣದಲ್ಲಿರುವ ಎಲ್ಲ ಕಟ್ಟಡಗಳು, ಶೌಚ ಗೃಹಗಳು ಮತ್ತು ಆವರಣದ ಸ್ವಚ್ಛತೆಯನ್ನೂ ಮತ್ತು ಹೊಸದಾಗಿ ನಿರ್ಮಿಸಿರುವ ಮಲಿನ ನೀರಿನ ಸಂಸ್ಕರಣಾ ಘಟಕದ (೧೦ ಲಕ್ಷ ಲೀಟರ್ ಸಾಮರ್ಥ್ಯದ ಘಟಕ) ನಿರ್ವಹಣೆಯನ್ನು ಸಂಘವೇ ವಹಿಸಿಕೊಳ್ಳಬೇಕೆಂದು ನಿರ್ಣಯಿಸಲಾಯಿತು.

೨. ಸಂಘವು ಈ ಜವಾಬ್ದಾರಿಯನ್ನು ನಿರ್ವಹಿಸಲು ಪ್ರತಿ ತಿಂಗಳು ಸುಮಾರು ೨ರಿಂದ ೨½ ಲಕ್ಷ ರೂಪಾಯಿಗಳು ಬೇಕಾಗಬಹುದು. ಇದಕ್ಕಾಗಿ ಸುಮಾರು ೨½ಯಿಂದ ೩ ಕೋಟಿ ರೂಪಾಯಿಗಳನ್ನು ಮೂಲದ್ರವ್ಯ ನಿಶ್ಚಿತ ಠೇವಣಿ (Corpus fund) ಯಾಗಲು ಅದರಿಂದ ಬರುವ ಬಡ್ಡಿ ಹಣದಿಂದ ಸ್ವಚ್ಛತಾ ನಿರ್ವಹಣೆ ಮಾಡುವುದು.

೩. ನಿಶ್ಚಿತ ಠೇವಣಿ ಸಂಗ್ರಹಣೆಗಾಗಿ ಪ್ರತಿಯೊಬ್ಬ ಹಳೆಯ ವಿದ್ಯಾರ್ಥಿ ಹಾಗೂ ಹಿತೈಷಿಗಳಿಂದ ಕನಿಷ್ಠ ಒಂದು ಸಾವಿರ ರೂಪಾಯಿ (೧೦೦೦/-)ಗಳಿಗೆ ಕಡಿಮೆ ಇಲ್ಲದಂತೆ ವಂತಿಗೆ ಯಾಗಿ ಪಡೆಯಬೇಕೆಂದು ತೀರ್ಮಾನಿಸಲಾಯಿತು.

ಈಗಾಗಲೇ ಈ ಬಗ್ಗೆ ಅಭಿಮಾನಿಗಳಲ್ಲಿ ಮನವಿ ಮಾಡಲಾಗಿದೆ. ಈ ಮನವಿಗೆ ಸ್ಪಂದಿಸಿ ಅನೇಕರು ದೇಣಿಗೆ ನೀಡಿರುತ್ತಾರೆ. ಎಲ್ಲ ಹಳೆಯ ವಿದ್ಯಾರ್ಥಿಗಳು ಹಾಗೂ ಹಿತೈಷಿಗಳು ಉದಾರವಾಗಿ ಉದ್ದೇಶಿತ ಒಳಚರಂಡಿ ವ್ಯವಸ್ಥೆ ಮತ್ತು ನಿರ್ವಹಣೆಗೆ ತಮ್ಮ ದೇಣಿಗೆಯನ್ನು ನೀಡುವ ಮೂಲಕ ಈ ಕಾರ್ಯದಲ್ಲಿ ಕೈಜೋಡಿಸಬೇಕೆಂದು ಕೋರುತ್ತೇವೆ.

ಶ್ರೀಮಠದಲ್ಲಿ ಒಳಚರಂಡಿ ವ್ಯವಸ್ಥೆ ಸಮರ್ಪಕವಾಗಿ ಆಗಬೇಕಾಗಿದ್ದು ಈ ಬಗ್ಗೆ ಯೋಜನೆ ರೂಪಿಸಿ ಭಾಗಶಃ ಪೂರೈಸಲಾಗಿದೆ. ಕರ್ನಾಟಕ ಸರ್ಕಾರವು ಉದಾರವಾಗಿ ನೀಡಿದ ೧೨೭೬ ಲಕ್ಷ ರೂಪಾಯಿಗಳ ಕೊಡುಗೆಯಿಂದ ಕೆಲವು ಕಟ್ಟಡಗಳು, ಶೌಚಾಲಯಗಳು ಹಾಗೂ ಮಲಿನ ನೀರಿನ ಸಂಸ್ಕರಣಾ ಘಟಕಗಳನ್ನು ನಿರ್ಮಿಸಲಾಗಿದೆ. ಈ ಕಟ್ಟಡ ಗಳಿಂದ ಸಂಸ್ಕರಣಾ ಘಟಕಕ್ಕೆ ಹೊಸದಾಗಿ ಸಂಪರ್ಕ ಕಲ್ಪಿಸಲಾಗಿದೆ. ಶ್ರೀಕ್ಷೇತ್ರದ ಇತರ ಎಲ್ಲಾ ಕಟ್ಟಡಗಳನ್ನು ಒಳಚರಂಡಿಗಳ ಮೂಲಕ ಸಂಸ್ಕರಣಾ ಘಟಕಕ್ಕೆ ಸಂಪರ್ಕ ಕಲ್ಪಿಸಬೇಕಾಗಿದೆ. ಆಗ ಮಾತ್ರ ಶ್ರೀಮಠದ ಒಳಚರಂಡಿ ವ್ಯವಸ್ಥೆ ಸಂಪೂರ್ಣವಾಗುತ್ತದೆ. ಸಂಸ್ಕರಣಾ ಘಟಕವೂ ಪೂರ್ಣ ಸಾಮರ್ಥ್ಯದಿಂದ ಕೆಲಸ ಮಾಡಲು ಅನುಕೂಲವಾಗುತ್ತದೆ. ಇನ್ನೂ ಮಾಡಬೇಕಾದ ಒಳಚರಂಡಿ ವ್ಯವಸ್ಥೆಗೆ ೪೫ ಲಕ್ಷ ರೂಪಾಯಿಗಳ ಅಂದಾಜು ತಯಾರಿಸಲಾಗಿದೆ. ಇದರ ಬಗ್ಗೆಯೂ ಸಂಘವು ಸೂಕ್ತವಾದ ತೀರ್ಮಾನ ತೆಗೆದುಕೊಳ್ಳಬೇಕಾಗಿದೆ.

ಶ್ರೀಕ್ಷೇತ್ರದ ಸ್ವಚ್ಛತೆ ಹಾಗೂ ನೈರ್ಮಲ್ಯೀಕರಣ ಯೋಜನೆಯು ಬಹುದಿನಗಳ ಹಾಗೂ ಅತ್ಯಾವಶ್ಯಕವಾಗಿ ಆಗಬೇಕಾದ ಕಾರ್ಯವೆಂಬುದು ಎಲ್ಲರ ಆಶಯವಾಗಿದೆ. ಸ್ವಚ್ಛತೆಯ ಕಾರ್ಯವನ್ನು ಯಾವುದಾದರೂ ಪರಿಣಿತ ಸಂಸ್ಥೆಗೆ ಮಾಸಿಕ ಆಧಾರದ ಮೇಲೆ ಗುತ್ತಿಗೆ ರೂಪದಲ್ಲಿ ವಹಿಸಿಕೊಡುವುದು ಸೂಕ್ತವೆಂದು ಅಭಿಪ್ರಾಯಪಡಲಾಗಿದೆ. ಈ ಯೋಜನೆಯು ಯಶಸ್ವಿಯಾಗಬೇಕಾದರೆ ಶ್ರೀಮಠದ ಎಲ್ಲ ಭಕ್ತಾದಿಗಳು, ಅಭಿಮಾನಿಗಳು ಮತ್ತು ಹಳೆ ವಿದ್ಯಾರ್ಥಿಗಳು ಹಾಗೂ ಹಿತೈಷಿಗಳು ಉದಾರವಾಗಿ ಧನಸಹಾಯ ಮಾಡುವ ಮೂಲಕ ಈ ಪವಿತ್ರ ಸೇವೆಯಲ್ಲಿ ಭಾಗಿಗಳಾಗಬೇಕೆಂದು ಕಳಕಳಿಯಿಂದ ಭಿನ್ನವಿಸಿಕೊಳ್ಳುತ್ತೇವೆ.

ಇಂತಿ

ಅಧ್ಯಕ್ಷರು, ಕಾರ್ಯದರ್ಶಿಗಳು ಹಾಗೂ ಸದಸ್ಯರು
ಹಳೆಯ ವಿದ್ಯಾರ್ಥಿಗಳ ಹಾಗೂ ಹಿತೈಷಿಗಳ ಸಂಘ,
ಕಾರ್ಯಕಾರಿ ಸಮಿತಿ, ಶ್ರೀ ಸಿದ್ಧಗಂಗಾಮಠ, ತುಮಕೂರು.





## ತಿರುಕ್ಕುರುಳ್

ಕನ್ನಡ ಅನುವಾದ : ನ. ಮುನಿಸ್ವಾಮಿ
ಅಧ್ಯಾಯ -೧೮
ಗೃಹಧರ್ಮ

### ಅಸೂಯೆ ಪಡದಿರುವುದು

ಸದಾಚಾರವೆಂದವನು ಅರಿವುದು, ತನ್ನ ಮನದಿ
ಮತ್ಸರವಿರದ ಗುಣವನು.

ಯಾರ ಮೇಲೂ ಮತ್ಸರವಿರದ ಗುಣವ ಹೊಂದಿರೆ,
ಅದಕೆ ಸಮನಾದ ಶ್ರೇಯ ಬೇರೊಂದಿಲ್ಲ.

ಧರ್ಮವನು ಅರ್ಥವನು ಲೆಕ್ಕಿಸಲು, ಅನ್ಯರ
ಸಿರಿಯನು ಕಂಡು ನಲಿಯದೆ ಕರುಬುವನು.

ಅಸೂಯೆಯಿಂದ ಅನ್ಯರಿಗೆ ಅಹಿತವನೆಸಗರು
ಅಧರ್ಮದಿಂದ ದುಃಖ ಬರುವುದನರಿತವರು.

ಹಗೆಗಳ ಕೇಡು ತಪ್ಪಿದರೂ, ಅಸೂಯೆಯುಳ್ಳವಗೆ
ಅದುವೇ ತಪ್ಪದೆ ಕೇಡ ತರುವುದು.

ಅನ್ಯರಿಗೆ ಕೊಡುವುದನು ಕಂಡು ಕರುಬುವವನ ಬಳಗ
ಉಡಲುಣಲಿಲ್ಲದೆ ಕೆಡುವುದು.

ಕರುಬುಳ್ಳವನ ಮೇಲೆ ತಾ ಕರುಬಿ ಶ್ರೀಲಕ್ಷ್ಮಿ
ಜ್ಯೇಷ್ಠಾಲಕ್ಷ್ಮಿಯನ್ನು ಬಿಟ್ಟಲ್ಲಿ ತೊಲಗುವಳು.

ಅಸೂಯೆ ಎಂಬೊಬ್ಬ ಪಾಪಿಯು ಸಂಪದವನಳಿಸಿ
ನರಕವನು ತಂದಿರಿಸುವುದು.

ಮತ್ಸರವುಳ್ಳವನ ಸಿರಿತನವನೂ ಸಜ್ಜನನ
ಬಡತನವನೂ ಪರೀಕ್ಷಿಸಿ ಅರಿವುದು.

ಮತ್ಸರಿಸಿ ಶ್ರೇಯ ಪಡೆದವರಿಲ್ಲ ಮತ್ತೆ ಶ್ರೇಯವದು
ಕುಂದದೆಂದೂ ಮತ್ಸರಿಸದರಿಗೆ

## ಸಂಘ ಶ್ರೀಮಠದ ಆಸ್ತಿ



"ಹಳೆಯ ವಿದ್ಯಾರ್ಥಿ ಹಾಗೂ ಹಿತೈಷಿ ಸಂಘ ಶ್ರೀಮಠದ ಆಸ್ತಿ. ಮಠದ ಅಭಿವೃದ್ಧಿ ವಾಹಿನಿಯಲ್ಲಿ ಸಂಘ ಸಲ್ಲಿಸುತ್ತಿರುವ ಸೇವೆ ಪ್ರಶಂಸನೀಯವಾದುದು. ಇದೇ ರೀತಿಯ ಅಭಿಮಾನ, ಪ್ರೀತಿ ಮುಂದೆಯೂ ಹೀಗೆ ಇರಲಿ. ನಿಮ್ಮ ಪ್ರೀತಿ ವಿಶ್ವಾಸ ದೊಡ್ಡದು ಪರಮಪೂಜ್ಯ ಶ್ರೀಗಳು ತಮ್ಮ ಪ್ರಸಾದವಾಣಿಯಲ್ಲಿ ತಿಳಿಸಿದರು. ಪೂಜ್ಯ ಶ್ರೀಗಳು ಡಿಸೆಂಬರ್ ೨೦ರಂದು ಶ್ರೀಮಠದಲ್ಲಿ ನಡೆದ ಹಳೆಯ ವಿದ್ಯಾರ್ಥಿ ಹಾಗೂ ಹಿತೈಷಿ ಸಂಘದ ವಾರ್ಷಿಕ ಸಮಾವೇಶದ ದಿವ್ಯಸಾನ್ನಿಧ್ಯ ವಹಿಸಿ ಆಶೀರ್ವಚನ ನೀಡಿದರು. ಅವರು ನುಡಿ ಸಂದೇಶದಲ್ಲಿ ಶ್ರೀಮಠದ ಗುರುಪರಂಪರೆ, ತಮ್ಮ ಗುರುಗಳಾದ ಶ್ರೀ ಉದ್ಧಾನ ಶಿವಯೋಗಿಗಳು ಶ್ರೀಮಠದ ಅಭಿವೃದ್ಧಿಗೆ ನೀಡಿದ ಕೊಡುಗೆಯನ್ನು ಸ್ಮರಿಸಿಕೊಂಡರು. ತಾವು ಬೆಳೆದ ಪರಿಸರ, ವಿದ್ಯಾಭ್ಯಾಸ, ಆಕಸ್ಮಿಕವಾಗಿ ಒದಗಿ ಬಂದ ಶ್ರೀಮಠದ ಸಂಪರ್ಕ, ನಿರೀಕ್ಷಿಸದೆ ಬಂದ ನಿರಂಜನ ಪಟ್ಟಾಧಿಕಾರ, ಆಗ ಮಠದಲ್ಲಿದ್ದ ಕಠಿಣ ಪರಿಸ್ಥಿತಿ ಎಲ್ಲವನ್ನು ಮುಕ್ತವಾಗಿ ಎಳೆ ಎಳೆಯಾಗಿ ಬಿಚ್ಚಿಟ್ಟರು. ಮಠದ ಕಷ್ಟದ ಪರಿಸ್ಥಿತಿಯಲ್ಲಿ ನೆರವು ನೀಡಿದ ಲಿಂಗೈಕ್ಯ ಟಿ.ಎನ್. ಕೆಂಪಹೊನ್ನಯ್ಯ, ಸಿದ್ಧರಾಮಣ್ಣ, ಸಾಮಿಲ್ ಶಿವಪ್ಪ, ಎ.ಕೆ.ಪಾರ್ಶ್ವನಾಥ್, ಮೊದಲಾದವರನ್ನು ಹಾಗೂ ತುಮಕೂರು, ನೆಲಮಂಗಲ, ಮಾಗಡಿ, ಹೊಸಕೋಟೆ ಭಾಗದ ಜನತೆಯನ್ನು ಈ ಸಂದರ್ಭದಲ್ಲಿ ಸ್ಮರಿಸಿದರು.

ಯಾವುದೇ ಹುದ್ದೆಯಲ್ಲಿ ಕಾರ್ಯ ನಿರ್ವಹಿಸುತ್ತಿರಲಿ, ಎಲ್ಲಿಯೇ ಇರಲಿ, ಪ್ರಾಮಾಣಿಕತೆಯಿಂದ ಕರ್ತವ್ಯ ನಿರ್ವಹಿಸಬೇಕು ಎಂದು ಹೇಳಿದ ಪೂಜ್ಯ ಶ್ರೀಗಳು ಸಮಾಜದಲ್ಲಿಂದು ಭ್ರಷ್ಟಾಚಾರ, ಸ್ವಾರ್ಥ, ಹಣದ ದಾಹ ಹೆಚ್ಚಾಗುತ್ತಿರುವುದಕ್ಕೆ ವಿಷಾದಿಸಿದರು. ಸ್ವಾತಂತ್ರ್ಯ ಬಂದ ನಂತರ ಸಾಮಾಜಿಕ ಜೀವನ ಕಲುಷಿತವಾಗುತ್ತಿರುವುದಕ್ಕೆ ನೊಂದು ನುಡಿದರು. ಜೀವನದಲ್ಲಿ ನೆಮ್ಮದಿ, ಶಾಂತಿ ಬರಬೇಕಾದರೆ ನಿಮ್ಮ ಸಾಂಸಾರಿಕ ಜೀವನ ಸುಖಮಯವಾಗಿರುವಂತೆ ನೋಡಿಕೊಳ್ಳಿ ಎಂದು ಕಿವಿಮಾತು ಹೇಳಿದರು.

ಒಂದು ಕಡೆ ಬಡತನವೂ ಜಾಸ್ತಿಯಾಗುತ್ತಿದೆ, ಸಂಪತ್ತು ಜಾಸ್ತಿಯಾಗುತ್ತಿದೆ, ಇಂಥಹ ಪರಿಸ್ಥಿತಿಯಲ್ಲಿ ಇವೆರಡರ ಅಂತರ ಕಡಿಮೆಯಾಗಬೇಕು ಎಂದರು. ಇವತ್ತು ಎಲ್ಲ ಕ್ಷೇತ್ರಗಳಲ್ಲಿ ಶೋಷಣೆ ಜಾಸ್ತಿಯಾಗುತ್ತಿದೆ. ಅದನ್ನು ತಪ್ಪಿಸುವ ಹೊಣೆಗಾರಿಕೆ ಎಲ್ಲರ ಮೇಲಿದೆ ಎಂದು ತಿಳಿಸಿದ ಶ್ರೀಗಳು. ಶ್ರೀಮಠದಲ್ಲಿ ವರ್ಷದಿಂದ ವರ್ಷಕ್ಕೆ ವಿದ್ಯಾರ್ಥಿಗಳ ಸಂಖ್ಯೆ ಜಾಸ್ತಿಯಾಗುತ್ತಿದೆ. ಸಂಖ್ಯೆಗೆ ಅನುಗುಣವಾಗಿ ಮೂಲಭೂತ ಸೌಲಭ್ಯಗಳು ಹೆಚ್ಚಾಗಬೇಕೆಂದರು,

ಉತ್ತರ ಕರ್ನಾಟಕದ ಕೆಲವು ಜಿಲ್ಲೆಗಳಲ್ಲಿ ನೆರೆ ಸಂತ್ರಸ್ತರ ಮಕ್ಕಳ ವಿದ್ಯಾಭ್ಯಾಸಕ್ಕೆ ಎಲ್ಲ ರೀತಿಯ ನೆರವು ನೀಡುವುದಾಗಿ ಈ ಸಂದರ್ಭದಲ್ಲಿ ತಿಳಿಸಿದರು. ಇವತ್ತು ನಿಷ್ಠೆ, ಶ್ರದ್ಧೆ ಕಡಿಮೆಯಾಗುತ್ತಿದೆ. ಪ್ರತಿಯೊಬ್ಬರೂ ನಿಷ್ಠೆಯುಳ್ಳವರಾಗಬೇಕು. ಪೂಜಾನಿಷ್ಠರಾಗಬೇಕು. ನಾವು ಮಾಡುವ ಪೂಜಾ ಫಲ ಮಠದ ಅಭಿವೃದ್ಧಿಗೆ ನೆರವಾಗಿದೆ ಎಂದು ತಿಳಿಸಿದರು.

ದಿನೇ ದಿನೇ ಬೆಲೆಗಳು ಗಗನಕ್ಕೇರುತ್ತಿರುವ ಬಗ್ಗೆ ಆತಂಕ ವ್ಯಕ್ತಪಡಿಸಿದ ಪೂಜ್ಯ ಶ್ರೀಗಳು ಪ್ರಾಸಂಗತವಾಗಿ ಅಕ್ಕಿ ಮತ್ತು ಬೇಳೆ ಬೆಲೆ ಹೆಚ್ಚಾಗುತ್ತಿರುವುದನ್ನು ಪ್ರಸ್ತಾಪಿಸಿ ಜನಸಾಮಾನ್ಯರ ಜೀವನ ದುಸ್ತರವಾಗುತ್ತಿರುವುದಕ್ಕೆ ವಿಷಾದಿಸಿದರು. ಇವತ್ತು ಸಮಾಜ ಉದ್ಧಾರವಾಗಬೇಕಾದರೆ









ಲಾಲ್‌ಬಹದ್ದೂರ್ ಶಾಸ್ತ್ರಿಯವರಂತಹ ದೂರದೃಷ್ಟಿಯುಳ್ಳ ಜನನಾಯಕರು ಬೇಕು ಎಂದು ಈ ಸಂದರ್ಭದಲ್ಲಿ ಸ್ಮರಿಸಿದರು.

ಸಮಾವೇಶದಲ್ಲಿ ಪ್ರಮುಖವಾಗಿ ಸ್ವಚ್ಛತಾ ಕಾರ್ಯಕ್ರಮದ ಬಗ್ಗೆ ಒತ್ತು ನೀಡಲಾಯಿತು. ಸ್ವಚ್ಛತಾ ಯೋಜನೆಯ ವಿವರಗಳನ್ನು ಸಭೆಯ ಮುಂದಿಟ್ಟ ನಿವೃತ್ತ ಮುಖ್ಯ ಇಂಜಿನಿಯರ್ ಶ್ರೀ ಬಿ.ಎನ್. ಚನ್ನಪ್ಪನವರು ಪ್ರತಿತಿಂಗಳು ಸ್ವಚ್ಛತಾ ನಿರ್ವಹಣೆಗಾಗಿ ಸುಮಾರು 2 ಲಕ್ಷ ರೂಗಳು ವೆಚ್ಚ ತಗಲುತ್ತದೆ ಎಂದು. ಇದಕ್ಕೊಂದು ಶಾಶ್ವತ ನಿಧಿ 3 ಕೋಟಿ ರೂಗಳನ್ನು ಠೇವಣಿಯಲ್ಲಿಟ್ಟು ಅದರಿಂದ ಬರುವ ಬಡ್ಡಿಯಿಂದ ನಿರ್ವಹಣೆ ಮಾಡುವುದಾಗಿ ತಿಳಿಸಿದರು. ಈ ಯೋಜನೆಯ ಯಶಸ್ಸಿಗೆ ಎಲ್ಲರ ಸಹಕಾರವನ್ನು ಕೋರಿದರು.

ಇದೇ ಸಂದರ್ಭದಲ್ಲಿ ಶ್ರೀ ಬಿ.ಎನ್. ಚನ್ನಪ್ಪನವರು ಮಾತನಾಡಿ ಉತ್ತರ ಕರ್ನಾಟಕದ ಕೆಲವು ಜಿಲ್ಲೆಗಳಲ್ಲಿ ನೆರೆ ಹಾವಳಿಯಿಂದ ಸಂಭವಿಸಿರುವ ಅನಾಹುತಗಳನ್ನು ವಿವರಿಸಿ ಪರಮಪೂಜ್ಯ ಶ್ರೀ ಶ್ರೀಗಳವರು ಶ್ರೀಮಠದ ವತಿಯಿಂದ ನೆರೆ ಸಂತ್ರಸ್ತರಿಗೆ 200 ಮನೆಗಳನ್ನು ಕಟ್ಟಿಸಿಕೊಡುವ ಬಗ್ಗೆ ತಿಳಿಸಿ, ಒಂದು ಮನೆಗೆ ಸುಮಾರು 1.40 ಲಕ್ಷ ರೂಗಳಂತೆ 200 ಮನೆಗಳಿಗೆ ಸುಮಾರು 3 ಕೋಟಿ ರೂಗಳ ವೆಚ್ಚ ತಗುಲುತ್ತದೆ ಎಂದು ತಿಳಿಸಿ ಈ ಯೋಜನೆಯ ಸಾಕಾರಕ್ಕೆ ಎಲ್ಲರ ಸಹಕಾರ, ಸಹಾಯವನ್ನು ಕೋರಿದರು. ಶ್ರೀ ಬಿ.ಎನ್. ಚನ್ನಪ್ಪನವರ ಮನವಿಗೆ ಸ್ಪಂದಿಸಿದ ಶ್ರೀ ರಂಗಹನುಮಯ್ಯ ಅವರು ಒಂದು ಮನೆಗೆ ತಗುಲುವ ವೆಚ್ಚವನ್ನು ಹಾಗೂ ಬೆಂಗಳೂರು ಮಲ್ಲತ್ತಹಳ್ಳಿಯ ಶ್ರೀ ಹೆಚ್. ಪಂಚಣ್ಣ ಅವರು ನಾಲ್ಕು ಮನೆಗಳಿಗೆ ತಗುಲುವ ವೆಚ್ಚವನ್ನು ಭರಿಸುವುದಾಗಿ ವಾಗ್ದಾನ ಮಾಡಿದರು.

ಸ್ವಚ್ಛತಾ ಕಾರ್ಯಕ್ರಮದ ಬಗ್ಗೆ ಶ್ರೀ ಮುದ್ದುರಂಗಯ್ಯ, ಶ್ರೀ ಹೆಚ್.ಬಿ. ನಂಜುಂಡಯ್ಯ ಅವರು ಕೆಲವು ಸಲಹೆಗಳನ್ನು ನೀಡಿದರು.

ಹಳೆಯ ವಿದ್ಯಾರ್ಥಿ ಹಾಗೂ ಹಿತೈಷಿ ಸಂಘದ ಕಾರ್ಯದರ್ಶಿಗಳಾದ ಶ್ರೀ ಕೆ.ಹೆಚ್. ಶಿವರುದ್ರಯ್ಯನವರು ವಿದ್ಯಾರ್ಥಿ ಕ್ಷೇಮಪಾಲನೆ ಯೋಜನೆಯ ಬಗ್ಗೆ ಸಭೆಗೆ ಪರಿಚಯ ಮಾಡಿಕೊಡುತ್ತಾ, ಈ ಯೋಜನೆಯಡಿ ನೂರು ಕೊಠಡಿಗಳನ್ನು ಕಟ್ಟಲಿದ್ದು, ಇದಕ್ಕಾಗಿ ಒಂದು ಕೊಠಡಿಗೆ ಒಂದು ಲಕ್ಷ ರೂಗಳ ವೆಚ್ಚ ತಗುಲುವುದಾಗಿ, ಯಾರಾದರೂ ದಾನಿಗಳು ಮುಂದೆ ಬಂದು ಕೊಠಡಿಗೆ ತಗುಲುವ ವೆಚ್ಚ ವನ್ನು ಭರಿಸಿದರೆ ಅವರು ತಿಳಿಸುವವರ ಸ್ಮರಣಾರ್ಥ ಹೆಸರನ್ನು ಕಲ್ಲಿನಲ್ಲಿ ಕೆತ್ತಿಸಿ ಕೊಠಡಿಯ ಮುಂಭಾಗದಲ್ಲಿ ಹಾಕುವುದಾಗಿ ತಿಳಿಸಿ, ಈಗಾಗಲೇ 65 ಜನ ದಾನಿಗಳು ಮುಂದೆ ಬಂದಿದ್ದಾರೆಂದು ತಿಳಿಸಿದರು. ಅವರ ಮನವಿಗೆ ಸ್ಪಂದಿಸಿದ ಶ್ರೀ ವಿಜಯಕುಮಾರ ಅವರು ತಮ್ಮ ಅಜ್ಜಿಯ ಸ್ಮರಣಾರ್ಥ ಒಂದು ಲಕ್ಷ ರೂಗಳನ್ನು ನೀಡಿದ ಬಗ್ಗೆ ಸಭೆಯ ಗಮನಕ್ಕೆ ತರಲಾಯಿತು.

## ಕ್ಷೇತ್ರ ವಾರ್ತೆ

ಕರ್ನಾಟಕ ವೀರಶೈವ ವಿದ್ಯಾಭಿವೃದ್ಧಿ ಸಂಸ್ಥೆಯ ಅಧ್ಯಕ್ಷರು, ಶ್ರೀಮಠದ ಹಳೆಯ ವಿದ್ಯಾರ್ಥಿಗಳೂ ಆದ ಶ್ರೀ ಬಿ.ಎಸ್. ಪರಮಶಿವಯ್ಯನವರು ಪರಮಪೂಜ್ಯ ಶ್ರೀ ಶ್ರೀಗಳವರ ಪೂರ್ವ ಯೋಜಿತ ಗದ್ದುಗೆ ಬಗ್ಗೆ ಮಾತನಾಡಿ, ಪ್ರಸ್ತುತ ಕಟ್ಟಿರುವ ಗದ್ದುಗೆ ಸೂಕ್ತ ಸ್ಥಳದಲ್ಲಿಲ್ಲ. ಇದನ್ನು ತಪೋವನದ ರೀತಿಯಲ್ಲಿ ನಿರ್ಮಿಸಿ ಲಕ್ಷಾಂತರ ಭಕ್ತರು ದರ್ಶನ ಮಾಡುವ ಅವಕಾಶ ಕಲ್ಪಿಸಿ ಕೊಡಬೇಕು. ನೋಡಲು ಆಕರ್ಷಿತವಾಗಬೇಕು. 'ಗೋಲ್ಡನ್ ಟೆಂಪಲ್' ರೀತಿಯಲ್ಲಿರಬೇಕು. ಅದರ ನಿರ್ಮಾಣಕ್ಕೆ ಪೂಜ್ಯರು ಎರಡು ಎಕರೆ ಭೂಮಿಯನ್ನು ನೀಡಿದರೆ; ಎಲ್ಲಾ ರೀತಿಯ ಸೌಲಭ್ಯಗಳನ್ನೊಳಗೊಂಡ ತಪೋವನವನ್ನು ಮಠದಿಂದ ಯಾವುದೇ ರೀತಿಯ ನೆರವನ್ನು ಪಡೆಯದೆ ನಿರ್ಮಿಸಿ ಕೊಡುವುದಾಗಿ ತಿಳಿಸಿದರು. ಇದೇ ಸಂದರ್ಭದಲ್ಲಿ ಉದ್ದೇಶಿತ ತಪೋವನದ ಮಾದರಿ ನಕ್ಷೆಯ ವಿವರಗಳನ್ನು ಸಭೆಯಲ್ಲಿ ವಿವರಿಸಿದರು. ಅವರು ಈಗಾಗಲೇ ವೀರಶೈವ ವಿದ್ಯಾಭಿವೃದ್ಧಿ ಸಂಸ್ಥೆಯ ವತಿಯಿಂದ 25 ಲಕ್ಷ ರೂಗಳನ್ನು ಮುಖ್ಯಮಂತ್ರಿಗಳ ನೆರೆ ಸಂತ್ರಸ್ತರ ನಿಧಿಗೆ ನೀಡುವ ವಾಗ್ದಾನ ಮಾಡಲಾಗಿದ್ದು, ಅದೇ ಹಣವನ್ನು ಶ್ರೀಮಠದ ವತಿಯಿಂದ ಕಟ್ಟಲಿರುವ
ವಸತಿ ನಿರ್ಮಾಣಕ್ಕೆ ನೀಡಲಾಗುವುದು ಎಂದರು. ಜೊತೆಗೆ ವೀರಶೈವ ಸಹಕಾರ ಬ್ಯಾಂಕ್ ವತಿಯಿಂದ 5 ಲಕ್ಷ ರೂಗಳನ್ನು ನೀಡುವುದಾಗಿ ಈ ಸಂದರ್ಭದಲ್ಲಿ ತಿಳಿಸಿದರು.

ಸಿದ್ಧಗಂಗಾ ಮಾಸಪತ್ರಿಕೆಯ ಸಂಪಾದಕರಾದ ಪ್ರೊ.ಹೆಚ್.ವಿ. ವೀರಭದ್ರಯ್ಯನವರು ಮಾತನಾಡಿ ಪರಮ ಪೂಜ್ಯ ಶ್ರೀಗಳವರು ಪಟ್ಟಾಧಿಕಾರವಾಗಿ ಬರುವ ಮಾರ್ಚ್ ಇಕ್ಕೆ ೮೦ ವರ್ಷ ತುಂಬುತ್ತದೆ. ಈ ಶುಭ ಸಂದರ್ಭದ ಸವಿನೆನಪಿಗಾಗಿ ವಿಶ್ವದ ೮೦ ಜನ ಶ್ರೇಷ್ಠ ಸಂತರ ಪರಿಚಯವನ್ನೊಳಗೊಂಡ ಸುಮಾರು ಒಂದು ಸಾವಿರ ಪುಟದ ಬೃಹತ್ ಗ್ರಂಥವನ್ನು ಪ್ರಕಟಿಸಲಿದ್ದು ರಾಷ್ಟ್ರಕವಿ ಡಾ॥ ಜಿ.ಎಸ್. ಶಿವರುದ್ರಪ್ಪನವರ ಅಧ್ಯಕ್ಷತೆಯಲ್ಲಿ, ಶ್ರೀ ಚನ್ನವೀರ ಕಣವಿ, ಪ್ರೊ. ಜಿ.ಎಸ್. ಸಿದ್ಧಲಿಂಗಯ್ಯ, ಶ್ರೀ ಗೊ.ರು. ಚನ್ನಬಸಪ್ಪ, ಟಿ.ಆರ್. ಮಹಾದೇವಯ್ಯ, ಡಾ॥ ಎಂ.ಜಿ. ನಾಗರಾಜ್, ಪ್ರೊ. ಓ.ಎಲ್. ನಾಗಭೂಷಣಸ್ವಾಮಿ, ಶ್ರೀ ಎಚ್.ಎಸ್. ಸಿದ್ಧಗಂಗಪ್ಪ ಅವರನ್ನೊಳಗೊಂಡ ಸಂಪಾದಕ ಸಮಿತಿಯನ್ನು ರಚಿಸಿದ್ದು ಈಗಾಗಲೇ ಕಾರ್ಯೋನ್ಮುಖವಾಗಿದೆ ಎಂದು ತಿಳಿಸಿದರು.

ಪೂಜ್ಯ ಶ್ರೀ ಸಿದ್ಧಲಿಂಗಮಹಾಸ್ವಾಮಿಗಳವರು ತಮ್ಮ ಆಶೀರ್ವಚನದಲ್ಲಿ ಪರಮಪೂಜ್ಯರು ಸಲ್ಲಿಸುತ್ತಿರುವ ಅನನ್ಯ ಸೇವೆಯ ಬಗ್ಗೆ ತಿಳಿಸಿ, ಶ್ರೀಮಠದ ಹಳೆಯ ವಿದ್ಯಾರ್ಥಿಗಳು ಹಾಗೂ ಹಿತೈಷಿಗಳು ಮಠದ ದೊಡ್ಡ ಸಂಪತ್ತು, ನಿಮ್ಮನ್ನು ನೋಡುವುದೇ ಪೂಜ್ಯರಿಗೆ ಅತೀವ ಸಂತೋಷ ಉಂಟಾಗುತ್ತದೆ. ನಿಮಗೂ ಅವರ ದರ್ಶನ ಹಾಗೂ ಅಶೀರ್ವಚನ ಕೇಳವ ಭಾಗ್ಯ ಪೂರ್ವಾರ್ಜಿತ ಪುಣ್ಯ ಎಂದು ತಿಳಿಸಿದರು.

ಪ್ರಾರಂಭದಲ್ಲಿ ಹಳೆಯ ವಿದ್ಯಾರ್ಥಿ ಸಂಘದ ಹಾಗೂ ಹಿತೈಷಿ ಸಂಘದ ಕಾರ್ಯದರ್ಶಿಗಳಾದ ಡಾ॥ ಎಂ.ಎಸ್. ಚನ್ನಬಸಪ್ಪ ಅವರು ಸ್ವಾಗತಿಸಿ ಪ್ರಾಸ್ತಾವಿಕ ನುಡಿಗಳನ್ನಾಡಿದರು. ಶ್ರೀ ಕೆ.ಎಚ್. ಶಿವರುದ್ರಯ್ಯನವರು ಹಳೆಯ ವಿದ್ಯಾರ್ಥಿ ಹಾಗೂ ಹಿತೈಷಿ ಸಂಘ ಹಾಗೂ ಸಿದ್ಧಗಂಗಾ ಗುರುಕುಲ ಅಭಿವೃದ್ಧಿ ಪ್ರತಿಷ್ಠಾನದ ಲೆಕ್ಕಪತ್ರ ಮಂಡಿಸಿದರು. ಸಿದ್ಧಗಂಗಾ ಕೈಗಾರಿಕಾ ಮತ್ತು ಕೃಷಿ ವಸ್ತುಪ್ರದರ್ಶನದ ಕಾರ್ಯದರ್ಶಿ ಶ್ರೀ ಬಿ. ಗಂಗಾಧರಯ್ಯ ಅವರು ವಸ್ತು ಪ್ರದರ್ಶನದ ಲೆಕ್ಕಪತ್ರ ವರದಿಯನ್ನು ಮಂಡಿಸಿದರೆ, ಸಿದ್ಧಗಂಗಾ ಮಾಸಪತ್ರಿಕೆಯ ಪ್ರಕಾಶಕರಾದ ಶ್ರೀ ಹೆಚ್.ಬಿ. ಗಂಗಾಧರಯ್ಯ ಅವರು ಪತ್ರಿಕೆಯ ಆಯವ್ಯಯದ ವರದಿಯನ್ನು ಮಂಡಿಸಿದರು. ಕಾರ್ಯಕ್ರಮ ಶ್ರೀ ಬಿ.ಎಸ್ ಮಲ್ಲಿಕಾರ್ಜುನಯ್ಯ ಹಾಗೂ ಶ್ರೀ ಜಿ. ಕುಮಾರಸ್ವಾಮಿ ಅವರ ಪ್ರಾರ್ಥನೆಯೊಂದಿಗೆ ಪ್ರಾರಂಭವಾಯಿತು. ಶ್ರೀ ಕೆ.ಹೆಚ್. ಶಿವರುದ್ರಯ್ಯನವರು ಕಾರ್ಯಕ್ರಮವನ್ನು ನಿರೂಪಿಸಿದರು. ಕೊನೆಯಲ್ಲಿ ಶ್ರೀ ಎಸ್.ಮಲ್ಲಿಕಾರ್ಜುನಯ್ಯನವರು ಶರಣು ಸಮರ್ಪಣೆ ಮಾಡಿದರು.

ವರದಿ : ಎಚ್.ಎಸ್. ಸಿದ್ಧಗಂಗಪ್ಪ

ಜೀವನ ಒಂದು ಕ್ರಿಯಾಕ್ಷೇತ್ರ, ಇಲ್ಲಿ ಕರ್ಮಶೀಲ ರಾಗಿ ಬದುಕುವುದು ಮುಖ್ಯ. ದುಡಿಮೆಗೆ ಇಲ್ಲಿ ಪ್ರಾಮುಖ್ಯತೆ. ದುಡಿಮೆ ಸತ್ಯಶುದ್ಧವಾಗಿರಬೇಕು. ಪರ ಹಿತಮುಖಿಯಾಗಿರಬೇಕು.

-ಶ್ರೀವಾಣಿ

# ದಿನದರ್ಶಿ 2010



## 2010 ರಜಾ ದಿನಗಳು

**ಜನವರಿ :**
14 – ಮಕರ ಸಂಕ್ರಾಂತಿ
26 – ಗಣರಾಜ್ಯೋತ್ಸವ

**ಫೆಬ್ರವರಿ :**
12 – ಮಹಾಶಿವರಾತ್ರಿ
27 – ಈದ್-ಮಿಲಾದ್

**ಮಾರ್ಚ್ :**
16 – ಚಾಂದ್ರಮಾನ ಯುಗಾದಿ
28 – ಮಹಾವೀರ ಜಯಂತಿ

**ಏಪ್ರಿಲ್ :**
2 – ಗುಡ್‌ಫ್ರೈಡೇ
14 – ಅಂಬೇಡ್ಕರ್ ಜಯಂತಿ

**ಮೇ :**
1 – ಕಾರ್ಮಿಕರ ದಿನಾಚರಣೆ
16 – ಬಸವೇಶ್ವರ ಜಯಂತಿ

**ಆಗಸ್ಟ್ :**
15 – ಸ್ವಾತಂತ್ರ್ಯ ದಿನಾಚರಣೆ

**ಸೆಪ್ಟೆಂಬರ್ :**
10 – ರಂಜಾನ್
11 – ವಿನಾಯಕ ಚತುರ್ಥಿ

**ಅಕ್ಟೋಬರ್ :**
2 – ಗಾಂಧೀ ಜಯಂತಿ
7 – ಮಹಾಲಯ ಅಮಾವಾಸ್ಯೆ
16 – ಆಯುಧ ಪೂಜೆ
17 – ವಿಜಯದಶಮಿ

**ನವೆಂಬರ್ :**
1 – ಕನ್ನಡ ರಾಜ್ಯೋತ್ಸವ
5 – ನರಕ ಚತುರ್ದಶಿ
7 – ಬಲಿಪಾಡ್ಯಮಿ – ದೀಪಾವಳಿ
17 – ಬಕ್ರೀದ್
24 – ಕನಕ ದಾಸರ ಜಯಂತಿ

**ಡಿಸೆಂಬರ್ :**
17 – ಮೊಹರಂ ಕಡೇ ದಿನ
25 – ಕ್ರಿಸ್‌ಮಸ್

### ಜನವರಿ

| | | | | | |
|---|---|---|---|---|---|
| ಭಾನು | 31 | 3 | 10 | 17 | 24 |
| ಸೋಮ | * | 4 | 11 | 18 | 25 |
| ಮಂಗಳ | * | 5 | 12 | 19 | 26 |
| ಬುಧ | * | 6 | 13 | 20 | 27 |
| ಗುರು | * | 7 | 14 | 21 | 28 |
| ಶುಕ್ರ | 1 | 8 | 15• | 22 | 29 |
| ಶನಿ | 2 | 9 | 16 | 23 | 30° |

### ಫೆಬ್ರವರಿ

| | | | | | |
|---|---|---|---|---|---|
| ಭಾನು | * | 7 | 14• | 21 | 28° |
| ಸೋಮ | 1 | 8 | 15 | 22 | * |
| ಮಂಗಳ | 2 | 9 | 16 | 23 | * |
| ಬುಧ | 3 | 10 | 17 | 24 | * |
| ಗುರು | 4 | 11 | 18 | 25 | * |
| ಶುಕ್ರ | 5 | 12 | 19 | 26 | * |
| ಶನಿ | 6 | 13• | 20 | 27 | * |

### ಮಾರ್ಚ್

| | | | | | |
|---|---|---|---|---|---|
| ಭಾನು | * | 7 | 14 | 21 | 28 |
| ಸೋಮ | 1 | 8 | 15• | 22 | 29 |
| ಮಂಗಳ | 2 | 9 | 16 | 23 | 30° |
| ಬುಧ | 3 | 10 | 17 | 24 | 31 |
| ಗುರು | 4 | 11 | 18 | 25 | * |
| ಶುಕ್ರ | 5 | 12 | 19 | 26 | * |
| ಶನಿ | 6 | 13 | 20 | 27 | * |

### ಏಪ್ರಿಲ್

| | | | | | |
|---|---|---|---|---|---|
| ಭಾನು | * | 4 | 11 | 18 | 25 |
| ಸೋಮ | * | 5 | 12 | 19 | 26 |
| ಮಂಗಳ | * | 6 | 13 | 20 | 27 |
| ಬುಧ | * | 7 | 14• | 21 | 28° |
| ಗುರು | 1 | 8 | 15 | 22 | 29 |
| ಶುಕ್ರ | 2 | 9 | 16 | 23 | 30 |
| ಶನಿ | 3 | 10 | 17 | 24 | * |

### ಮೇ

| | | | | | |
|---|---|---|---|---|---|
| ಭಾನು | 30 | 2 | 9 | 16 | 23 |
| ಸೋಮ | 31 | 3 | 10 | 17 | 24 |
| ಮಂಗಳ | * | 4 | 11 | 18 | 25 |
| ಬುಧ | * | 5 | 12 | 19 | 26 |
| ಗುರು | * | 6 | 13 | 20 | 27° |
| ಶುಕ್ರ | * | 7 | 14• | 21 | 28 |
| ಶನಿ | 1 | 8 | 15 | 22 | 29 |

### ಜೂನ್

| | | | | | |
|---|---|---|---|---|---|
| ಭಾನು | * | 6 | 13 | 20 | 27 |
| ಸೋಮ | * | 7 | 14 | 21 | 28 |
| ಮಂಗಳ | 1 | 8 | 15 | 22 | 29 |
| ಬುಧ | 2 | 9 | 16 | 23 | 30 |
| ಗುರು | 3 | 10 | 17 | 24 | * |
| ಶುಕ್ರ | 4 | 11 | 18 | 25 | * |
| ಶನಿ | 5 | 12• | 19 | 26° | * |

### ಜುಲೈ

| | | | | | |
|---|---|---|---|---|---|
| ಭಾನು | * | 4 | 11• | 18 | 25° |
| ಸೋಮ | * | 5 | 12 | 19 | 26 |
| ಮಂಗಳ | * | 6 | 13 | 20 | 27 |
| ಬುಧ | * | 7 | 14 | 21 | 28 |
| ಗುರು | 1 | 8 | 15 | 22 | 29 |
| ಶುಕ್ರ | 2 | 9 | 16 | 23 | 30 |
| ಶನಿ | 3 | 10 | 17 | 24 | 31 |

### ಆಗಸ್ಟ್

| | | | | | |
|---|---|---|---|---|---|
| ಭಾನು | 1 | 8 | 15 | 22 | 29 |
| ಸೋಮ | 2 | 9 | 16 | 23 | 30 |
| ಮಂಗಳ | 3 | 10• | 17 | 24° | 31 |
| ಬುಧ | 4 | 11 | 18 | 25 | * |
| ಗುರು | 5 | 12 | 19 | 26 | * |
| ಶುಕ್ರ | 6 | 13 | 20 | 27 | * |
| ಶನಿ | 7 | 14 | 21 | 28 | * |

### ಸೆಪ್ಟೆಂಬರ್

| | | | | | |
|---|---|---|---|---|---|
| ಭಾನು | * | 5 | 12 | 19 | 26 |
| ಸೋಮ | * | 6 | 13 | 20 | 27 |
| ಮಂಗಳ | * | 7 | 14 | 21 | 28 |
| ಬುಧ | 1 | 8• | 15 | 22 | 29 |
| ಗುರು | 2 | 9 | 16 | 23° | 30 |
| ಶುಕ್ರ | 3 | 10 | 17 | 24 | * |
| ಶನಿ | 4 | 11 | 18 | 25 | * |

### ಅಕ್ಟೋಬರ್

| | | | | | |
|---|---|---|---|---|---|
| ಭಾನು | 31 | 3 | 10 | 17 | 24 |
| ಸೋಮ | * | 4 | 11 | 18 | 25 |
| ಮಂಗಳ | * | 5 | 12 | 19 | 26 |
| ಬುಧ | * | 6 | 13 | 20 | 27 |
| ಗುರು | * | 7• | 14 | 21 | 28 |
| ಶುಕ್ರ | 1 | 8 | 15 | 22° | 29 |
| ಶನಿ | 2 | 9 | 16 | 23 | 30 |

### ನವೆಂಬರ್

| | | | | | |
|---|---|---|---|---|---|
| ಭಾನು | * | 7 | 14 | 21° | 28 |
| ಸೋಮ | 1 | 8 | 15 | 22 | 29 |
| ಮಂಗಳ | 2 | 9 | 16 | 23 | 30 |
| ಬುಧ | 3 | 10 | 17 | 24 | * |
| ಗುರು | 4 | 11 | 18 | 25 | * |
| ಶುಕ್ರ | 5 | 12 | 19 | 26 | * |
| ಶನಿ | 6• | 13 | 20 | 27 | * |

### ಡಿಸೆಂಬರ್

| | | | | | |
|---|---|---|---|---|---|
| ಭಾನು | * | 5• | 12 | 19 | 26 |
| ಸೋಮ | * | 6 | 13 | 20 | 27 |
| ಮಂಗಳ | * | 7 | 14 | 21° | 28 |
| ಬುಧ | 1 | 8 | 15 | 22 | 29 |
| ಗುರು | 2 | 9 | 16 | 23 | 30 |
| ಶುಕ್ರ | 3 | 10 | 17 | 24 | 31 |
| ಶನಿ | 4 | 11 | 18 | 25 | * |

Cover printed at : Geetanjali Graphics, # 4, M.S.R. Indl. Estate, Bangalore-54. Ph : 23804087